# ಉದಯ

(ಕರ್ನಾಟಕ ರಾಜ್ಯೋದಯದ ಸವಿನೆನಪಿಗಾಗಿ)



ಸಂಪಾದಕರು:

ಬಾಳೇರಿ ಅಶೆಟ್ಟಿ

ಪ್ರಕಾಶಕರು:

ಉದಯ ಪ್ರಕಾಶನ, ಗೋಕಾಕ

೧೯೫೭

# ಶುಭ ಸಂದೇಶಗಳು.

* ........ 'ಉದಯ'ವು ಉತ್ತರೋತ್ತರ ಉರ್ಜಿತಾವಸ್ಥೆಗೆ ಬರಲೆಂದು, ಬಾಳಿ ಬೆಳಗಲೆಂದು ಅಪೇಕ್ಷಿಸುತ್ತೇನೆ'

— ಪೂಜ್ಯ ಶ್ರೀ. ಕುಮಾರಸ್ವಾಮಿಗಳು
ನವಕಲ್ಯಾಣಮಠ, ಧಾರವಾಡ.

* 'ಉದಯೋನ್ಮುಖ ರಾಷ್ಟ್ರಶಕ್ತಿಯ ನಿಮಿತ್ತವಾಗಿ ಉದಯೋನ್ಮುಖ ಸಂಪಾದಕ–ವರ್ಗದ 'ಉದಯ'ದ ಸಂಪಾದಕತ್ವದಲ್ಲಿ ಮಾಡಿರುವ ಪ್ರಯತ್ನ ಸ್ತುತ್ಯಾರ್ಹವಾಗಿದೆ. 'ಉದಯ'ವು ಸಮಾಜದಲ್ಲಿ ಸುಜ್ಞಾನದ ವಿಚಾರಗಳ ಸಾಧನವಾಗಲೆಂದು ಆಶಿಸುತ್ತೇನೆ.' (ಹಿಂದೀ ಅನುವಾದ).

— ಪಂಡಿತ ದೀನದಯಾಳ ಉಪಾಧ್ಯಾಯ,
ಅಖಿಲ ಭಾರತೀಯ ಜನಸಂಘದ ಪ್ರಧಾನ ಕಾರ್ಯದರ್ಶಿಗಳು.

'ನಿಮಗೆ ಒಳ್ಳೆಯದಾಗಲಿ.'

—ಶ್ರೀ. ಕೆ. ಹನುಮಂತಯ್ಯ,
ಮೈಸೂರಿನ ಮಾಜಿ ಮುಖ್ಯಮಂತ್ರಿಗಳು.

* 'ಉದಯ' ಪತ್ರಿಕೆಯ ಪುಟಗಳನ್ನು ತಿರುವಿ ಹಾಕಿದ್ದೇನೆ. ತರುಣ ಲೇಖಕರ ಲೇಖನ ಸಾಧನೆಗೆ ಇಂಥ ಪ್ರಯತ್ನಗಳು ಅತ್ಯವಶ್ಯ– ಅವರ ಜಾಣ್ಮೆ ತಾಳ್ಮೆಯು ಚೆನ್ನಾಗಿ ಬೆಳೆಯಲಿ. ಅವರ ಲೇಖನ ಶಕ್ತಿ ಮುಂದರಿಯಲಿ. ಎಲ್ಲ ಇಲ್ಲಿಯ ಲೇಖಕರಿಗೆ ನನ್ನ ಹೃತ್ಪೂರ್ವಕ ಶುಭಾಶಯಗಳು.'

—ಡಾ. ರಂ. ಶ್ರೀ. ಮುಗಳಿ,
ವ್ಹಾಯಿಸ್ ಪ್ರಿನ್ಸಿಪಾಲರು, ವಿಲಿಂಗ್ಡನ್ ಕಾಲೇಜ ಸಾಂಗಲಿ.

* "........ ಬೆಳಗಾವಿ ನಾಡಿನ ಕನ್ನಡ ತರುಣರು ಈಗ ನಾಲ್ಕು ವರ್ಷಗಳಿಂದ ಒಂದು ಕೈಬರಹದ ಪತ್ರಿಕೆಯನ್ನು ನಡೆಯಿಸುತ್ತ ಬಂದುದೇ ಅವರ ಕಾರ್ಯನಿಷ್ಠೆಗೆ ದ್ಯೋತಕವಾಗಿದೆ. ಇದೇ ನಿಷ್ಠೆ, ಕನ್ನಡ ಪ್ರೇಮಗಳು ತರುಣರಲ್ಲಿ ಬೆಳೆದು ಬಂದು 'ಉದಯ'ವು ಕನ್ನಡ ನಾಡಿನ ಶ್ರೇಷ್ಠ ಪತ್ರಿಕೆಗಳಲ್ಲಿ ಒಂದಾಗಲೆಂದು ಹಾರೈಸುವೆ.

—ಮಿರ್ಜಿ ಅಣ್ಣಾರಾಯರು, ಸೇಡಬಾಳ.

# ಉದಯ

( ಕರ್ನಾಟಕ ರಾಜ್ಯೋದಯದ ಸವಿನೆನಪಿಗಾಗಿ )



ಸಂಪಾದಕರು :

**ಬಾಳೇಶ ಲಕ್ಷೆಟ್ಟಿ, ಜ್ಯೂ ಬಿ. ಎ.**

ಪ್ರಕಾಶಕರು:

**ಉದಯ ಪ್ರಕಾಶನ, ಗೋಕಾಕ**

**೧೯೫೬**

ಪ್ರಕಾಶಕರು :
**ಚಾಳೇಶ ಶಂ. ಲಕ್ಷೆಟ್ಟಿ,**
ಉಷಯ ಪ್ರಕಾಶನ, ' ಗಂಗಾನಿಲಯ
ಗುರುವಾರಪೇಟೆ, ಗೋಕಾಕ.

ಸಲಹೆಗಾರರ ಸಮಿತಿ :

**ಪ್ರೊ. ವ್ಹಿ. ಜಿ. ಕುಲಕರ್ಣಿ,** M. A., LL. B.
**ಪ್ರೊ. ಸಂ. ಶಿ. ಭೂಸನೂರಮಠ,** M. A.
**ಪ್ರಿ. ಎಸ್. ಡಿ. ಇಂಚಲ,** B. A., B T.
**ಶ್ರೀ. ಪಿ. ಟಿ. ಕುಲಕರ್ಣಿ,** M. A., B. T.
**ಶ್ರೀ. ಬಿ. ಎ. ಸನದಿ,** B. A.



ಪ್ರಥಮ ಮುದ್ರಣ : ಡಿಶೆಂಬರ, ೧೯೫೬.
೫೦೦ ಪ್ರತಿಗಳು.


**ಬೆಲೆ : ಎಂಟು ಆಣೆ.**

ಮುದ್ರಕರು :
**ಡಿ. ಎಸ್. ಕಬಾಡಗಿ,**
ಮ್ಯಾನೇಜರ,
ದಿ ವಿಶ್ವಭಾರತ ಪ್ರಿಂ. ಮತ್ತು ಪ. ಕಂ.
ಲಿ., ಬೆಳಗಾವಿ.

# ಉದಯುದ ಬಳಗ.

( ೧೯೫೩-೫೪, ೧೯೫೪-೫೫ )





ಉಪಾಧ್ಯಕ್ಷರು

ಶ್ರೀ. ಎಮ್. ಜಿ. ಅಂಡಾನಿ ಅಧ್ಯಕ್ಷರು ಶ್ರೀ. **ಆರ್. ಸಿ. ಪಾಟೀಲ.**

**೧೯೫೫--೫೬.**

ಅಧ್ಯಕ್ಷರು— **ಪ್ರೊ. ಸಂ ಶಿ ಭೂಸನೂರಮಠ.** M- A.

ಉಪಾಧ್ಯಕ್ಷರು;— ಶ್ರೀ. ಆರ್. ವ್ಹಿ. ಮುರಾಳಿಮನಿ. B. A.

ಕೋಶಾಧ್ಯಕ್ಷರು;— **ಶ್ರೀ ಬಿ. ಬಿ ಕಲ್ಯಾಣಿ** ಯಾದವಾಡ.

ಕಾರ್ಯದರ್ಶಿಗಳು;— ಶ್ರೀ. ದೊಡ್ಡಮನಿ ಹಾಗೂ **ಶಂಕರ ಧರಣಿ.**

**೧೯೫೬-೫೭.**

ಅಧ್ಯಕ್ಷರು:— **ಪ್ರೊ. ವ್ಹಿ. ಜಿ ಕುಲಕರ್ಣಿ.** M. A., LL. B.

ಕಾರ್ಯಾಧ್ಯಕ್ಷರು.— ಶ್ರೀ. ಆರ್. ವ್ಹಿ. **ಮೂಲಿಮನಿ.** B. A. ಬೆಳಗಾವಿ.

ಉಪಾಧ್ಯಕ್ಷರು,— **ಶ್ರೀ. ಬಿ. ಬಿ. ಕಲ್ಯಾಣಿ** ಯಾದವಾಡ.

ಕೋಶಾಧ್ಯಕ್ಷರು;— **ಶ್ರೀ** ಶ್ರೀಶೈಲ ಪಿ. ಹಂದಿಗುಂದ.

ಕಾರ್ಯದರ್ಶಿಗಳು;— **ಶ್ರೀ. ಶಂಕರ ಧರಣಿ,** ಮಹಾನಂದ ಭೋಯಿ ಹಾಗೂ

ಶ್ರೀ. ಪ್ರಭು ಮಹಾಬಳಶೆಟ್ಟಿ.

ಕಾರ್ಯಸಮಿತಿಯ ಸದಸ್ಯರು;— ಶ್ರೀಗಳಾದ ಎಂ. ಭಾಲಚಂದ್ರ.

**ಎನ್. ಜಿ. ಪಾಟೀಲ,** ಬಾಬು ದೊಡ್ಡಮನಿ, ವಿಠ್ಠಲ. ಬಾ. ಹಟ್ಟಿ.

# ಅನುಕ್ರಮಣಿಕೆ.


ಪುಟ

೧) ಅನುಕ್ರಮಣಿಕೆ........ ೧

೨) ಉದಯ........ಕವನ........ಬಿ. ಬಿ. ಹಿಂಗಮಿರೆ. ೨

೩) ಸಂಪಾದಕರ ನುಡಿ ........ ಬಾಳೇಶ ಲಕ್ಷೆಟ್ಟಿ. ೩

೪) ಕನ್ನಡ ಕಂದರಿಗೆ....ಕವನ...ಕೃಷ್ಣಮೂರ್ತಿ ಪುರಾಣಿಕ. ೮

೫) ಭಾರತೀಯ ಸಂಸ್ಕೃತಿ ....... ಮಿರ್ಜಿ ಅಣ್ಣಾರಾಯರು. ೯

೬) ಬಟ್ಟೆ ........ಕವನ........ ಈಶ್ವರ ಸಣಕಲ್ಲ. ೧೦

೭) ವಿದ್ಯಾರ್ಥಿ...............ರಂ. ಶ್ರೀ. ಮುಗಳಿ. ೧೧

೮) ಕನ್ನಡಮ್ಮನ ಕೊರಗು...ಕವನ....ಎಸ್. ಡಿ. ಇಂಚಲ. ೧೨

೯) ಸ್ವರ್ಗದಲ್ಲಿ ಸೋಮಾರಿ.... ಪ್ರೊ ಎ. ಕೆ. ರಾಮಾನುಜನ್. ೧೪

೧೦) ರಸಿಕರಂಗರಿಗೆ....ಕವನ....ಶಾಮ ಶಮನೇವಾಡಿ. ೧೭

೧೧) ಅನಾಥೆ...............ರಾಜಾರಾಮ ಮಜಲೀಕರ. ೧೮

೧೨) ಮೂಡಿ ಬಾ ಬುದ್ಧ...ಕವನ....ಪ್ರಲ್ಹಾದರಾವ ಕುಲಕರ್ಣಿ. ೨೪

೧೩) ಆದರ್ಶ ಮಾತೆ........ಕುಮಾರಿ ಕೆ. ಲೀಲಾ. ೨೬

೧೪) ನವಜೀವನ ....ಕವನ.... ಬಾಳು ಬಿ. ಉಪಾಧ್ಯೆ. ೨೭

೧೫) ನಮ್ಮ ಹೊಣೆ.... ....... ಬಾಳೇಶ ಲಕ್ಷೆಟ್ಟಿ. ೨೮

೧೬) ಲತೆಲಲಿತೆ ....ಕವನ....ಶ್ರೀಕಾಂತ ಶಮನೇವಾಡಿ. ೩೦

೧೭) ಅಮರ ಶಿಲ್ಪಿ ...............ವಸಂತ ಬೆಟಗೇರಿ. ೩೧

೧೮) ರಂಗಭೂಮಿ ....ಕವನ....ಕೆ, ಮಲ್ಲಿಕಾರ್ಜುನ. ೩೫

೧೯) ಶ್ರೀ ಕೃಷ್ಣಮೂರ್ತಿ ಪುರಾಣಿಕರ ಜೀವನ–ಮತ್ತು–ಸಾಹಿತ್ಯ. ........ಎಂ. ಭಾಲಚಂದ್ರ. ೩೬

೨೦) ವ್ಯರ್ಥ ಆಶೆ ....ಕವನ.... ಬಿ. ಎ. ಸನದಿ. ೩೯

೨೧) ರೈತನ ಬೆನ್ನೆಲಬು–ಬಸವ....ಮುರಗೇಶ ಅಂಟಿನ. ೪೦

೨೨) ಬೆಳದಿಂಗಳು........ಕವನ....ಚಂದ್ರಶೇಖರ ಕಂಬಾರ. ೪೨

೨೩) 'ಉದಯ"ವನ್ನು ಕುರಿತು............ ೪೩

# ಉದಯ

೧

ಇಂದಾಯಿತು
ಸೌಭಾಗ್ಯದ ನಸುಕು;
ಬಂದಿಳಿಯಿತು
ಅದೊ ಸ್ವರ್ಗದ ಬೆಳಕು !

೨

ಮೂಡಿರುವುದು
ನೋಡೆಂತಹ ಉದಯ;
ಅರಳಿರುವುದು
ಕರುನಾಡಿನ ಹೃದಯ !

೩

ಹೊಮ್ಮಿರುವುದು
ಭಾಗ್ಯೋದಯ ಗಾನ;
ತಂದಿರುವುದು
ನವನಾಡಿಗೆ ತ್ರಾಣ !

೪

ಬಂದಿರುವುದು
ಚೈತನ್ಯವು ಬೀಸಿ;
ನಾಡಾಗಿದೆ
ಆನಂದದ ಕಾಶಿ !

—ಬಿ. ಬಿ. ಹಿಂಗಮಿರೆ

# ಸಂಪಾದಕರ ನುಡಿ.

**ನ**ವಕರ್ನಾಟಕ ರಾಜ್ಯೋದಯದ ಶುಭಕಾಲದಲ್ಲಿ 'ಉದಯ'ದ ನವರಾಜ್ಯೋದಯದ ಸವಿನೆನಪಿಗಾಗಿ ಹೊರಡಿಸಿದ ಪುಸ್ತಿಕೆಯನ್ನು ಜನತೆಯ ಮುಂದಿಡಲು ತುಂಬಾ ಹರುಷವೆನಿಸುತ್ತದೆ.

ಹಸ್ತಲಿಖಿತ ಮಾಸಪತ್ರಿಕೆಯಾದ '**ಉದಯ**'ವು ಭಾರತೀಯ ಧರ್ಮ-ಸಂಸ್ಕೃತಿಗಳ ಪುನರ್ಜಾಗೃತಿಯ ಕಾರ್ಯ ಕೈಕೊಂಡು ಜನತೆಯ ಹೃದಯಮಂದಿರದಲ್ಲಿ ಒಂದು ಆದರ್ಶಸ್ಥಾನವನ್ನು ಗಳಿಸಿರುವದು, ಅದರ ಧ್ಯೇಯ ಧೋರಣೆಗಳಿಗೊಂದು ಭೂಷಣವೇ ಸರಿ. ಭಾರತ ಮಾತೆಯ ಹಾಗೂ ಕನ್ನಡಮಾತೆಯ ಮಂಗಲ ಆಶೀರ್ವಾದದಿಂದಲೂ, ನಾಡ ಬಾಂಧವರ ಹೃತ್ಪೂರ್ವಕ ಶುಭಾಶಯ ಸಹಕಾರಗಳಿಂದಲೂ ಉದಯವು ತನ್ನ ಜೀವನ ಯಾತ್ರೆಯಲ್ಲಿ ಬಂದ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸಿ ಮುನ್ನಡೆಯಿತು. 'ಉದಯ'ವು ಉದಯವಾಗಿ ಉನ್ನತ ಮಾರ್ಗದಲ್ಲಿ ಕ್ರಮಿಸಲು ಶ್ರೀಗಳಾದ ಬಿ ಎ. ಮುಂಡಾಸ, ಪ್ರಲ್ಹಾದರಾವ. ಕುಲಕರ್ಣಿ, ಬಿ. ವ್ಹಿ. ನರಗುಂದ, ಎಸ್. ಸಿ. ಪಾಟೀಲ, ಎಸ್ ಡಿ ಇಂಚಲ, ಬ. ಗಂತುರಮಠ, ಬಾ. ಮ. ಯರಗಟ್ಟಿ, ಬಿ. ಎ. ಸನದಿ, ಮೊದಲಾದ ಮಹನೀಯರ ಶ್ರಮ್ಮ ಬಹುವರಿಯಾಗಿ "ಉದಯ"ಕ್ಕೆ ದೊರಕಿದೆ. ಈ ಮಹನೀಯರಿಗೆಲ್ಲ ನಾವು ಚಿರಋಣಿಯಾಗಿದ್ದೇವೆ. ಇದೇಬಗೆಯಾಗಿ ಈ ಎಲ್ಲ ಮಹನೀಯರ ಸ್ನೇಹಸಹಕಾರಗಳು ನಮಗೆ ದೊರಕುವವೆಂದು ತುಂಬಾ ನಂಬಿದ್ದೇವೆ.

"ಉದಯ"ವು ತನ್ನ ನಾಲ್ಕು ವರುಷಗಳ ಯಾತ್ರೆಯನ್ನು ಅತ್ಯಂತ ಯಶಸ್ವಿಯಾಗಿ ಮುಕ್ತಾಯಗೊಳಿಸಿ ೧೯೫೭ರ ಜಾನೇವರಿ ೧ ರಂದು ಅಯ್ದನೆಯ ವರುಷದಲ್ಲಿ ಪಾದಾರ್ಪಣೆ ಮಾಡುವದೆಂದು ಹೇಳಲು ನಮಗೆ ತುಂಬಾ ಸಂತೋಷವೆನಿಸುತ್ತದೆ. ಕಳೆದ ಹಲವು ವರುಷಗಳ ಸಿಂಹಾವಲೋಕನವನ್ನು ಇಂದು ಮಾಡಿಕೊಂಡು ಭವಿಷ್ಯದಲ್ಲಿ ಎಂದಿಗಿಂತಲೂ

ಹೆಚ್ಚಿನ ಸೇವೆಯನ್ನು ಜನತೆಗೆ ನೀಡುವ ಆತ್ಮವಿಶ್ವಾಸದಿಂದ ನಮ್ಮ ನವ ರಾಜ್ಯೋದಯದ ದಿವ್ಯ ಸಂದೇಶದೊಡನೆ 'ಉದಯ'ವನ್ನು ಓದುಗರ ಕೈಯಲ್ಲಿ ಇಡುತ್ತಿರುವೆವು. ನಾಡಬಾಂಧವರಲ್ಲಿ ವಿಶುದ್ಧ ರಾಷ್ಟ್ರಭಾವನೆಯನ್ನು ಜಾಗ್ರತಗೊಳಿಸಿ ತನ್ಮೂಲಕ ಒಂದು ಸುಸಂಘಟಿತ ನಾಡಿನ ನಿರ್ಮಾಣದೆಡೆಗೆ ಜನತೆಯನ್ನು ಮುನ್ನಡೆಸುವ ಉದಾತ್ತ ಧ್ಯೇಯವನ್ನು ಇಟ್ಟುಕೊಂಡ "ಉದಯ"ವು ಇಂದು ಅಚ್ಚಾಗಿ ಜನತೆಯ ಕೈಯಲ್ಲಿ ಸೇರುತ್ತಲಿದೆ.

'ಉದಯ'ವು ೧೯೫೩ರಲ್ಲಿ ಜಾನೇವರಿ ೧೮ರಂದು ಗೋಕಾಕದಲ್ಲಿ ಜನ್ಮತಾಳಿತು. "ಉದಯ"ವು ಉದಯವಾಗಲು ಪ್ರಾಮುಖ್ಯವಾಗಿ ಶ್ರೀ. ಬಿ ಎ. ಮುಂಡಾಸ M. A. LL. B. ಹಾಗೂ ಶ್ರೀ. ಪ್ರಲ್ಹಾದರಾವ ಕುಲಕರ್ಣಿ M. A. B. T. ಅವರು ಪರಿಶ್ರಮಪಟ್ಟಿದ್ದಾರೆ. ಅಥಣಿಯ ಶ್ರೀ. ಭಾವುರಾವ ದೇಶಪಾಂಡೆ B. A. ಅವರು ಹಸ್ತಲಿಖಿತ ಮಾಸಪತ್ರಿಕೆಗೆ 'ಉದಯ'ವೆಂದು ಸುಯೋಗ್ಯ ನಾಮಕರಣ ಮಾಡಿದ್ದಾರೆ. 'ಉದಯ'ದ ಜನಕರಿಗೆ ಹಾಗೂ ಶ್ರೀ ದೇಶಪಾಂಡೆಯವರಿಗೆ ನಾವು ಚಿರಋಣಿಯಾಗಿದ್ದೇವೆ. ಪ್ರಥಮ ಹಾಗೂ ದ್ವಿತೀಯ ವರುಷಗಳಿಗೆ (೧೯೫೩-೫೪, ೧೯೫೪-೫೫) ಗೋಕಾಕದ ಮಾಜಿ ನಗರಾಧ್ಯಕ್ಷರಾದ ಶ್ರೀ. ಎಂ. ಜಿ. ಅಂದಾನಿಯವರು ಅಧ್ಯಕ್ಷರಾಗಿಯೂ, ನಗರಸಭೆಯ ಮಾನ್ಯಸದಸ್ಯರಾದ ಶ್ರೀ. ಆರ್. ಸಿ. ಪಾಟೀಲ ಅವರು ಉಪಾಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿ "ಉದಯ"ಕ್ಕೆ ನವಚೈತನ್ಯ ತಂದು ಕೊಟ್ಟರು. ದ್ವಿತೀಯ ವರುಷದ ಅಧ್ಯಕ್ಷಸ್ಥಾನವನ್ನು ಲಿಂಗರಾಜ ಕಾಲೇಜದ ಪ್ರೊ. ಸಂ. ಶಿ. ಭೂಸನೂರಮಠ M. A. ಅವರು ವಹಿಸಿದರು. ಬೆಳಗಾವಿ ಡಿ. ಸಿ. ಸಿ. ಬ್ಯಾಂಕದ ಸೆಕ್ರೆಟರಿಗಳಾದ ಶ್ರೀ. ಆರ್. ವ್ಹಿ. ಮೂಲಿಮನಿ B. A. ಅವರು ಉಪಾಧ್ಯಕ್ಷ ಸ್ಥಾನವನ್ನು ವಹಿಸಿದರು. ನಾಲ್ಕನೆಯ ವರುಷಕ್ಕೆ ಪ್ರೊ. ವ್ಹಿ. ಜಿ. ಕುಲಕರ್ಣಿ M. A., LL. B. ಅವರು ಅಧ್ಯಕ್ಷರಾಗಿಯೂ, ಶ್ರೀ. ಆರ್. ವ್ಹಿ. ಮೂಲಿಮನಿಯವರು ಕಾರ್ಯಾಧ್ಯಕ್ಷರಾಗಿಯೂ, ಯಾದವಾಡದ ಶ್ರೀ. ಬಿ. ಬಿ. ಕಲ್ಯಾಣಿಯವರು ಉಪಾ

ಧ್ಯಕ್ಷರಾಗಿಯೂ ಆಯ್ಕೆಹೊಂದಿರುವರು. ಪ್ರೊ. ಶಂ.ರಾ ಮೊಕಾಶಿಯವರು ಹಲವುಕಾಲ 'ಉದಯ'ದ ಮಾರ್ಗದರ್ಶಕರಾಗಿದ್ದರು. ಈ ಎಲ್ಲ ಮಹನೀಯರ ಪರಿಶ್ರಮದ ಫಲವಾಗಿ ಉದಯವು ಮುನ್ನಡೆಯಲು ಶಕ್ಯವಾಯಿತು. ಆಗಾಗ ಹಲವು ವಿಶೇಷ ಸಂಚಿಕೆಗಳನ್ನು ಹೊರಡಿಸಲಾಯಿತು. ದೀಪಾವಳಿ ವಿಶೇಷ ಸಂಚಿಕೆಯು ದೀಪಾವಳಿಯ ಶುಭದಿನದಂದು ಗೋಕಾಕ ಹಾಯಸ್ಕೂಲದಲ್ಲಿ, ಶ್ರೀ. ಎ. ಆರ್. ಪಂಚಗಾವಿ ವಕೀಲರು M. L. A. ಅವರ ಅಧ್ಯಕ್ಷತೆಯಲ್ಲಿ ಗೋಕಾಕ ಹಾಯಸ್ಕೂಲದ ಹೆಡ್‌ಮಾಸ್ತರರಾದ ಶ್ರೀ. ಬಿ. ಎ. ಮುಂಡಾಸ ಅವರಿಂದ ಉದ್ಘಾಟಿಸಲ್ಪಟ್ಟಿತು. ಈ ಸಮಾರಂಭದಲ್ಲಿ ಶ್ರೀಗಳಾದ, ರಾವಸಾಹೇಬ ಹಿಡಕಲ್, ಕೇಳಕರ ವಕೀಲರು, ಚಂಬಣ್ಣಾ ಅಂಗಡಿ, ಸಾತಪುತ್ತೆ ಮೊದಲಾದ ನಗರದ ಕೆಲವು ಪ್ರಮುಖ ವ್ಯಕ್ತಿಗಳು "ಉದಯ"ದ ಸ್ತುತ್ಯ ಕಾರ್ಯವನ್ನು ಹೊಗಳಿದರು. ಮೈಸೂರಿನ ಹಿಂದಿನ ಮುಖ್ಯ ಮಂತ್ರಿಗಳಾದ ಶ್ರೀ. ಕೆ. ಹನುಮಂತಯ್ಯ, ಮುಂಬಯಿ ರಾಜ್ಯದ ಮಾನ್ಯ ಮಂತ್ರಿಗಳಾಗಿದ್ದ ಶ್ರೀ. ಬಿ. ಡಿ. ಜತ್ತಿ, ಅಖಿಲ ಭಾರತೀಯ ಜನಸಂಘದ ಪ್ರಧಾನ ಕಾರ್ಯದರ್ಶಿಗಳಾದ ಪಂ. ದೀನದಯಾಳ ಉಪಾಧ್ಯಾಯ, ಸುಪ್ರಸಿದ್ಧ ಸಾಹಿತಿಗಳೂ, ಸಾಂಗಲಿ ವಿಲಿಂಗ್ಡನ್ ಕಾಲೇಜದ ವ್ಹಾಯಿಸ್ ಪ್ರಿನ್ಸಿಪಾಲರೂ ಆಗಿರುವ ಡಾ. ರಂ. ಶ್ರೀ. ಮುಗಳಿ, 'ವಿಕ್ರಮ' ಸಂಪಾದಕರಾದ ಶ್ರೀ. ಬಿ. ಎಸ್. ಎನ್. ಮಲ್ಯ ಮೊದಲಾದ ಮಹನೀಯರು 'ಉದಯ'ದ ಸ್ತುತ್ಯ ಕಾರ್ಯವನ್ನು ಕಂಡು ಹೊಗಳಿ ತಮ್ಮ ಶುಭಾಶೀರ್ವಾದವನ್ನು ಪತ್ರಿಕೆಯಲ್ಲಿ ಬರೆದರು. ಹೀಗೆ ಉದಯವು ಜಾತಿ, ಮತ, ಪಕ್ಷ ಪಂಗಡಗಳ ಗೋಜಿಗೆ ಹೋಗದೆ ಎಲ್ಲ ಜನಗಳ ಪ್ರೀತಿಗೆ ಪಾತ್ರವಾಗಿದೆ. ಕರ್ನಾಟಕ ರಾಜ್ಯೋದಯ ದದಿನ ಪತ್ರಿಕೆಯು ಪರವಾಗಿ ಸ್ವಾಗತ ಕೋರಿ ರಚಿಸಿದ ಕವನವನ್ನು ರಾಜಪ್ರಮುಖರಾದ ಶ್ರೀ ಜಯಚಾಮರಾಜ ಒಡೆಯರ ಬಹಾದ್ದೂರ್ ಅವರಿಗೆ ಅರ್ಪಿಸಲ್ಪಟ್ಟಿತು. ಕೈಬರಹದ ಪತ್ರಿಕೆಯನ್ನು ಸತತವಾಗಿ ನಾಲ್ಕು ವರುಷಗಳ ವರೆಗೆ ನಡೆಯಿಸಿಕೊಂಡು ಬರುವದು ಕಷ್ಟದ ಕೆಲಸವಾಗಿದೆ. ಉದಯವು ಎಲ್ಲಕಷ್ಟಗಳನ್ನು ಧೈರ್ಯದಿಂದ

ಎದುರಿಸಿ ಹಿಮಾದ್ರಿಯಂತೆ ಅಚಲವಾಗಿ ಮುನ್ನಡೆಯಿತು. ಎಲ್ಲ ಹಿರಿಯ ಕಿರಿಯರ ಸ್ನೇಹ ಸಹಕಾರಗಳ ಫಲವಾಗಿ ಇಂದು "ಉದಯ"ವು ಅಚ್ಚಾಗಿ ಜನಗಳ ಕೈಯಲ್ಲಿ ಶೋಭಿಸುತ್ತಲಿದೆ.

ಕಳೆದ ಮೂರು ವರ್ಷಗಳಿಂದ "ಉದಯ"ದ ಕಾರ್ಯದಲ್ಲಿ ತನು ಮನ ಧನದಿಂದ ಸಹಕಾರ ನೀಡಿದ ಶ್ರೀಶೈಲ ಹಂದಿಗುಂದ, ಸಿದ್ದೇಶ ಕಲ್ಯಾಣಿ ಹಾಗೂ ಶಿವರಾಯ ಕಲ್ಯಾಣಿ ಅವರಿಗೆ ನಾವು ತುಂಬಾ ಋಣಿಯಾಗಿರುವೆವು.

'ಉದಯ'ದ ಹಿತಚಿಂತಕರಲ್ಲಿ ಒಬ್ಬರಾದ ಬೆಳಗಾವಿಯ ಶ್ರೀ.ವ್ಹಿ. ಜಿ. ಜಿಗಜಿನ್ನಿ ವಕೀಲರು ದಮ್ಮಿನ ವಿಕಾರದಿಂದ ಲಿಂಗೈಕ್ಯರಾದುದು ವಿಷಾದದ ಸಂಗತಿಯಾಗಿದೆ. ವಿಧಿವಿಲಾಸವು ಹೇಳಲು ಬಾರದು. ದಿ. ಜಿಗಜಿನ್ನಿ ಯವರ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ದಯಾಘನನಲ್ಲಿ ನಮ್ಮ ಪ್ರಾರ್ಥನೆಯು.

ಈ ಪುಸ್ತಿಕೆಯಲ್ಲಿ ವಿವಿಧ ವಿಷಯುಗಳಿಗೆ ಸಂಬಂಧಿಸಿದ ಲೇಖನಗಳನ್ನು ಆ ವಿಷಯಗಳಲ್ಲಿ ನುರಿತ ಲೇಖಕರಿಂದ ಸಂಗ್ರಹಿಸಿ ಪ್ರಕಟಿಸಿದ್ದೇವೆ. ಶ್ರೀಗಳಾದ, ಕೃಷ್ಣಮೂರ್ತಿ ಪುರಾಣಿಕ, ರಂ. ಶ್ರೀ. ಮುಗಳಿ, ಮಿರ್ಜಿ ಅಣ್ಣಾರಾಯರು, ಎ. ಕೆ. ರಾಮಾನುಜನ್, ಈಶ್ವರ ಸಣಕಲ್ಲ, ಎಸ್. ಡಿ. ಇಂಚಲ ಮೊದಲಾದ ಹಿರಿಯ ಸಾಹಿತಿಗಳು ತಮ್ಮ ಅಮೌಲ್ಯ ಲೇಖನಗಳನ್ನು ಉದಯಕ್ಕೆ ಸಲ್ಲಿಸಿದ್ದಾರೆ. ಈ ಕಾರ್ಯದಲ್ಲಿ ಸಹಕರಿಸಿದ ಎಲ್ಲ ಹಿರಿಯ ಕಿರಿಯ ಲೇಖಕರಿಗೆ, ವಿಶೇಷವಾಗಿ ಕುಮಾರಿ. ಕೆ. ಲೀಲಾ ಹಾಗೂ ರಾಜಾರಾಮ ಮಜಲೀಕರ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಓದುಗರು ಇವುಗಳನ್ನು ಓದಿ ತಿಳಿದುಕೊಂಡರೆ ನಾವು ಪಟ್ಟ ಶ್ರಮವು ಸಾರ್ಥಕವಾಗುವದೆಂದು ನಂಬಿದ್ದೇವೆ. ವಿದ್ಯಾರ್ಥಿಗಳಿಂದ ರೂಪಿತವಾದ ಈ "ಉದಯ" ಪುಸ್ತಿಕೆಯನ್ನು ಲಿಂಗರಾಜ ಕಾಲೇಜದ ಪ್ರಿನ್ಸಿಪಾಲರಾದ ಶ್ರೀ. ಜಿ. ಎಸ್. ಪರಮಶಿವಯ್ಯ ಅವರಿಗೆ ಸಮರ್ಪಿಸಲಾಗಿದೆ.

ತನ್ನ ಪ್ರಖರ, ಪವಿತ್ರ ಧ್ಯೇಯವನ್ನು ಸಾಧಿಸಲು ಇಂದಿನವರೆಗೆ ಸಹಕರಿಸಿ ಸಹಾಯಮಾಡಿದ ಎಲ್ಲ ಬಂಧುಗಳಿಗೆ ನಮ್ಮ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇವೆ. "ಉದಯ"ದ ಬಲಸಂವರ್ಧನ ನಿಧಿಗೆ ಧನಸಹಾಯ ಮಾಡಿದ ಮಹನೀಯರೆಲ್ಲರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ದಿ ವಿಶ್ವಭಾರತ ಮುದ್ರಣಾಲಯದ ವ್ಯವಸ್ಥಾಪಕರಾದ ಶ್ರೀ. ಡಿ. ಎಸ್. ಕಬಾಡಗಿಯವರು ಮುದ್ರಣ ಕಾರ್ಯವನ್ನು ಅಂದವಾಗಿ ನಿರ್ವಹಿಸಿ ಕೊಟ್ಟದ್ದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಗಳು. ಇನ್ನು ಮುಂದೆಯೂ ಅವರ ಸ್ನೇಹ ಸಹಕಾರಗಳು ಸಿಗುವವೆಂದು ನಂಬಿದ್ದೇವೆ. "ಉದಯ"ವು ಮುಂದೆಯೂ ಮುನ್ನಡೆಯುವಂತೆ ಆ ಶಕ್ತಿಶಾಲಿ ಶ್ರೀ ಶಂಕರನು ಆಶೀರ್ವದಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ನವರಾಜ್ಯವು ಭಾರತಖಂಡದಲ್ಲಿ ಒಂದು ಆದರ್ಶ ಸ್ಥಾನವನ್ನು ಹೊಂದಿ ಆದರದ ಆಗರವಾಗಲಿ. ಜಯ್ ಭಾರತ !

**ಬಾಳೇಶ ಲಕ್ಷೆಟ್ಟಿ.**

# ಕನ್ನಡ ಕಂದರಿಗೆ

ಶ್ರೀ ಕೃಷ್ಣಮೂರ್ತಿ ಪುರಾಣಿಕ, ಗೋಕಾಕ,
ಬಿ. ಎ , ಬಿ. ಟಿ.

೧

ಹಾರುತಲಿದೆ ಕನ್ನಡ ಗುಡಿ
ಹಿರಿ ಹೆಮ್ಮೆಯ ತೋರಿ;
ತೋರುತಲಿದೆ ಕನ್ನಡ ನುಡಿ
ಸವಿ ಕಂಪನು ಬೀರಿ.

೨

ಕನ್ನಡ ನುಡಿಯೊಳು ಹಾಲಿನ ರುಚಿಯಿದೆ
ಜೇನಿನ ಸವಿಯಿದೆ ಬನ್ನಿರೆಲೆ
ಕನ್ನಡ ಗುಡಿಯೊಳಗೆಲ್ಲವು ತುಂಬಿದೆ
ಕಂದರು ನೀವ್ಯೆತನ್ನಿರೆಲೆ !

೩

ಕತೆಗಳ ಹೊಳೆಯೊಳಗೀಜಲು ಬನ್ನಿರಿ
ಕಾವ್ಯರಸವನೇ ಕುಡಿಕುಡಿದು;
ರಂಗಸ್ಥಳದೊಳು ನಾಟಕವಾಡಿರಿ
ತಾಳ ಮದ್ದಲೆಯ ಹಿಡಿಹಿಡಿದು.

೪

ಕನ್ನಡ ನಾಡಿನ ಪುಣ್ಯಸ್ಥಳದೊಳು
ಯಾತ್ರಿಕರಾಗಿಹ ನೀವೆಲ್ಲ,
ಕನ್ನಡತಾಯಿಯ ಮನ್ನಣೆ ಮಕ್ಕಳು
ಧನ್ಯರಾದಿರೋ ನೀವೆಲ್ಲ !

೫

ಕನ್ನಡ ನುಡಿಯೇ ಜೀವನ ಮಿಡಿಯಲಿ
ಕನ್ನಡ ತನವೇ ಕೆಚ್ಚಾಗಿ,
ಧನ್ಯತೆ ಪಡೆಯಲಿ ಬೆಳಕನು ತೋರಲಿ
ಕನ್ನಡ ನಾಡೇ ನಿಮಗಾಗಿ.

# ಭಾರತೀಯ ಸಂಸ್ಕೃತಿ

ಲೇಖಕರು : ಶ್ರೀ ವಿ. ಜಿ. ಅಣ್ಣಾರಾಯರು ; ಸೇಡಬಾಳ.

ಸಂಸ್ಕೃತಿ ಎಂಬುದು ವಿಶಾಲವಾದ ಅರ್ಥವುಳ್ಳ ಪದವಾಗಿದೆ. ಇದನ್ನು ಸ್ವಲ್ಪದರಲ್ಲಿ ವಿವರಿಸುವದು ಸಾಧ್ಯವಿಲ್ಲದ ಮಾತಾಗಿದೆ. ಮಾನವನ ನಡೆ, ನುಡಿ, ಅವನ ಹೃದಯದ ಔದಾರ್ಯ, ಅವನಕಿಗಳೆಲ್ಲ ಈ ಸಂಸ್ಕೃತಿಯೆಂಬುದರಲ್ಲಿ ಸಮಾವೇಶವಾಗುತ್ತವೆ. ಇಡೀ ಮಾನವ ಜನಾಂಗವು ಪ್ರಕೃತಿಯ ಮೇಲೆ ಸಂಪಾದಿಸಿದ ವಿಜಯದಿಂದ ಯಾವ ಒಂದು ಜೀವನದ ರೀತಿಯು ರೂಪಗೊಂಡಿದೆಯೋ ಅದೆಲ್ಲ ಸಂಸ್ಕೃತಿಯೆಂಬ ಹೆಸರಿನ ಕೆಳಗೆ ಸೇರಿ ಹೋಗುತ್ತದೆ. ಇಂಥ ವಿಶ್ವಸಂಸ್ಕೃತಿಗೆ ಭಾರತೀಯರಾದ ನಾವು ಒಂದು ವಿಶಿಷ್ಟ ಕಾಣಿಕೆಯನ್ನು ನೀಡಿದ್ದೇವೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ನಾಗರಿಕತೆಯು ತುಂಬ ಬೆಳೆದಿದೆ ಈ ನಾಗರಿಕತೆಯೆಂಬುದು ಸಂಸ್ಕೃತಿಯೆಂಬ ಆತ್ಮದ ದೇಹವಿದ್ದಂತೆ. ಇಷ್ಟೇ ಅಲ್ಲ, ನಾಗರಿಕತೆ, ಭೌತಿಕವಾದರೆ, ಸಂಸ್ಕೃತಿಯು ಅಧ್ಯಾತ್ಮಿಕವಾಗಿದೆ. ಉಡಿಗೆ, ತೊಡಿಗೆ, ಯಂತ್ರೋಪಕರಣ ಜೀವನ ಸೌಲಭ್ಯಗಳನ್ನೆಲ್ಲ ಒದಗಿಸಿಕೊಳ್ಳುವದು ನಾಗರಿಕತೆಯ ಕರ್ತವ್ಯವಾಗಿದೆ. ಇದಕ್ಕೆ ಅಧ್ಯಾತ್ಮಿಕ ಅಸ್ತಿವಾರವಿಲ್ಲವಾದರೆ ಅದು ಜೀವನದಲ್ಲಿ ಅಶಾಂತಿಯನ್ನು ಹುಟ್ಟಿಸುತ್ತದೆ. ಪಾಶ್ಚಾತ್ಯ ರಾಷ್ಟ್ರಗಳ ಈ ಭೌತಿಕ ಪ್ರಪಂಚದಲ್ಲಿಯ ಏರಾಟವೇ ಇಂದಿನ ವಿಶ್ವದ ಅಶಾಂತಿಗೆ ಕಾರಣವಾಗಿದೆ. ಈ ಅಶಾಂತಿಯನ್ನು ತಪ್ಪಿಸುವದು ನಿವೃತ್ತಿಯ ಮೇಲೆ ಕಣ್ಣಿಟ್ಟು ಪ್ರವೃತ್ತಿಯ ಪಥದಲ್ಲಿ ಸಾಗುವ ಭಾರತೀಯರಿಂದಲೇ ಸಾಧ್ಯವಿದೆ.

ಭಾರತವು ಸ್ವಾತಂತ್ರ್ಯ ಸಂಪಾದಿಸಿದ ಮೇಲೆ ತನ್ನ ಅಂತರ್ ರಾಷ್ಟ್ರೀಯ ದೃಷ್ಟಿಕೋನವೊಂದನ್ನು ರೂಪಿಸಿಕೊಂಡಿತು. ಅದರಲ್ಲಿ ಅದು ವಿಶ್ವಮಾನ್ಯವಾದ ಪಂಚಶೀಲಗಳನ್ನು ಅನುಸರಿಸಲಿಕ್ಕೆ ಜಗತ್ತಿನ ವಿವಿಧ ರಾಷ್ಟ್ರಗಳಿಗೆ ಕೇಳಿಕೊಂಡಿದೆ. ಈ ಪಂಚಶೀಲಗಳು ನಮ್ಮ ಭಾರತೀಯ ಧರ್ಮಗಳ ಅಸ್ತಿವಾರದ ಮೇಲೆ ನಿಂತಿವೆ. ಈ ಧರ್ಮದೃಷ್ಟಿಯು ಪ್ರತಿಯೊಬ್ಬ ಮಾನವನನ್ನು ರಾಷ್ಟ್ರವನ್ನು, 'ಸುಖವಾಗಿ ಬಾಳು ; ಬಾಳಗೊಡು' ಎಂಬ ತತ್ವದ ಕಡೆಗೆ ಒಯ್ಯುತ್ತದೆ. ಅದರಿಂದ ಪರಸ್ಪರರಲ್ಲಿ ಸಹಕಾರ, ಸಹಾನುಭೂತಿಗಳು ಬೆಳೆದು ಸಹಜೀವನವು ಸಿದ್ಧಿಸುವದು. ಇದರಿಂದ ಲೋಕಕಲ್ಯಾಣವು ಸಾಧಿಸುವದು. ಈ ಸಾಧನೆಯೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ.

# ಬಟ್ಟೆ

ಶ್ರೀ ಈಶ್ವರ ಸಣಕಲ್ಲ.

೧

ಕಡಲ ತಳದ ಮುತ್ತು–ಮಣಿಗ–
ಳೆಂಥ ಬಟ್ಟೆ ತುಳಿದಿವೆ !
ಗಿಡದ ಪಣ್ಗಳೆಂಥ ಕಷ್ಟ–
ನಷ್ಟಗಳಲಿ ಬೆಳೆದಿವೆ !

೨

ಹೂವು ಕಂಪನೀಯಲೆಷ್ಟು
ಕಾಲ ತಪವ ನಿಂದಿತೊ !
ದೇವನಡಿಯ ಸೇರಲೆಷ್ಟು
ಜನ್ಮಗಳಲಿ ಬಂದಿತೊ !

೩

ಊರ ಸೇರ್ವ ಪಥಿಕಗಂತು
ಬಟ್ಟೆಯೊಂದೆ ಸಾಧನೆ !
ದಾರಿಯೆಡರುಗಳನು ಸಹಿಸಿ
ಕ್ರಮಿಪುದೆಯಾರಾಧನೆ !

# ವಿದ್ಯಾರ್ಥಿ

ಲೇಖಕರು:—ಡಾ. ರಂ. ಶ್ರೀ. ಮುಗಳಿ, ಸಾಂಗಲಿ,
ಎಮ್ ಎ., ಬಿ. ಟಿ.

ವಿದ್ಯೆಯನ್ನು ಬಯಸುವವನು, ವಿದ್ಯೆಯೇ ತನ್ನ ಪರಮಾರ್ಥ ಅಂದರೆ ಮುಖ್ಯಗುರಿಯೆಂದು ತಿಳಿದು ಬೆಳೆಯುತ್ತಿರುವವನು ವಿದ್ಯಾರ್ಥಿ. ವಿದ್ಯೆ ಅಂದರೇನು ? ವಿದ್ಯೆ ಅಂದರೆ ಜ್ಞಾನ, ತಿಳಿವಳಿಕೆ. ಜ್ಞಾನ ಅಂದರೆ ಶಾಸ್ತ್ರಜ್ಞಾನ ಮಾತ್ರವಲ್ಲ, ಲೋಕಜ್ಞಾನ ಮಾತ್ರವಲ್ಲ. ಜ್ಞಾನ ಅಂದರೆ ಜೀವನ ಜ್ಞಾನ. ಮನುಷ್ಯ ಜೀವನ ಯಾತಕ್ಕಾಗಿದೆ, ಅದು ಹೇಗಿದ್ದರೆ ಸಂಪೂರ್ಣವಾಗುತ್ತದೆ, ಸಫಲವಾಗುತ್ತದೆ ಎಂಬ ತಿಳಿವಳಿಕೆಯೇ ಜೀವನಜ್ಞಾನ. 'ಸಾ ವಿದ್ಯಾ ಯಾ ವಿಮುಕ್ತಯೆ' ಎಂಬ ಮಾತು ಇದನ್ನೇ ಸೂಚಿಸುತ್ತದೆ. ವಿಮುಕ್ತಿಯನ್ನು ಯಾವುದು ಕೊಡುತ್ತದೋ ಅದು ವಿದ್ಯೆ. ವಿಮುಕ್ತಿಯೆಂದರೆ ಸಂಸಾರದಿಂದ ವಿಮೋಚನೆ, ಮೋಕ್ಷ ಎಂದು ತಿಳಿಯುವುದುಂಟು. ಸಂಸಾರದಿಂದ ವಿಮೋಚನೆ ಅಂದರೆ ಸಂಸಾರದಿಂದ ಪಲಾಯನವಲ್ಲ. ಸಂಸಾರದಲ್ಲಿಯು ಸಾರ ಸುಖವನ್ನು ಪಡೆಯಲು ಸಂಸಾರದ ಮೋಹ ಮಾಯೆಗಳಿಂದ ವಿಮೋಚನೆ ಪಡೆಯಬೇಕು. ಅಂತೇ ವಿದ್ಯಾರ್ಥಿ ಮೋಕ್ಷಾರ್ಥಿಯಾಗಬೇಕು. ತನ್ನ ವ್ಯಕ್ತಿತ್ವ ವಿಕಾಸಕ್ಕೆ ಅಡ್ಡಿಯಾಗಿ ನಿಲ್ಲುವ ದೋಷ ದೌರ್ಬಲ್ಯಗಳಿಂದಲೂ ಅಲ್ಪತ್ವ ಭ್ರಾಂತಿಗಳಿಂದಲೂ ಆಲಸ್ಯಪೂರ್ವಗ್ರಹಗಳಿಂದಲೂ ಅವನು ವಿಮುಕ್ತನಾಗಬೇಕು.

ನವಕರ್ನಾಟಕ ನಿರ್ಮಾಣವು ೧೯೫೬ ನವಂಬರ ೧ ರಂದು ದೀವಳಿಗೆಯ ಶುಭಮುಹೂರ್ತದಲ್ಲಿ ಆಗಲಿದೆ. ಅಂದು ನಾವೆಲ್ಲ ಆದರ್ಶ ವಿದ್ಯಾರ್ಥಿಗಳಾಗುವ ನಿರ್ಧಾರ ಮಾಡೋಣ. ನಮ್ಮ ಸುತ್ತುಮುತ್ತು ತೊಡಕಿಕೊಂಡಿರುವ ಮತ್ತು ನಮ್ಮ ಪ್ರಗತಿಗೆ ಹಾಗೂ ಕರ್ನಾಟಕದ ಏಳಿಗೆಗೆ ಅಡ್ಡಿಯಾಗಿರುವ ಕೋಳಕುಬಳ್ಳಿಗಳನ್ನು ಕತ್ತರಿಸಿ ವಿಮುಕ್ತರಾಗೋಣ; ಕರ್ನಾಟಕ, ಭಾರತ ಮತ್ತು ವಿಶ್ವ ಇವುಗಳ ಸೇವೆಗೆ ಸನ್ನದ್ಧರಾಗಿ ಸಾಗೋಣ. ವೇಗ ವೇಗದಿಂದ ಓಡೋಣ.

# ಕನ್ನಡಮ್ಮನ ಕೊರಗು

ಶ್ರೀ. ಎಸ್. ಡಿ. ಇಂಚಲ,
ಬಿ. ಎ. ಬಿ. ಟಿ.

(ಕರುನಾಡನ್ನಗಲಿ ಹೋಗಿರುವ ಸೋದರಸೋದರಿಯರನ್ನು ಕುರಿತು)

ಎತ್ತಿ ಹಾಲುಣಿಸಿರ್ದ ತವರುಮನೆಯನ್ನಗಲಿ
ಋಣವೆತ್ತ ಪರಿಪರಿಯ ಮೋಹಮಮತೆಯನುಳಿದು
ತಬ್ಬಲಿಗಳಾಗಿರ್ದ ಕರುನಾಡ ಸೋದರರೆ
ಮರಗುವೆನ್ ನಿಮಗಾಗಿ ಕರಗಿ ಕಡುವಿರಹದಲಿ.

ಹೊರನಾಡ ವಲಯದಲಿ ಗಡಿನಾಡ ತಡಿಗಳಲಿ
ತಾಯನಗಲಿದ ನಿಬಿಡ ನಿಟ್ಟುಸಿರಿನಲ್ಲಿ
ಬಣಬಣಿಸುತಿದೆ ಬಾಳು ಬರಿ ನಿರಾಶೆಯಲಿ.
ಕರುನಾಡಿನಲಿ ಇತ್ತ ಜಯಘೋಷ ಮೊಳಗುತಿದೆ

ವಿಜಯೋತ್ಸವದ ದೀಪ ಮನೆಮನೆಯ ಬೆಳಗುತಿದೆ
ಆನಂದದಮೃತರಸ ಮನಮನಕೂ ತೀವುತಿದೆ.
ತಾಯೊಂದ ಕಣ್ಣಿನಲಿ ಅದೋ ನೀರು ಸುರಿಯುತಿದೆ!
ಎಂತು ಸಹಿಸುವಳಮ್ಮ ಕರುಳ ಸವಿನೆನಹುಗಳ !

ಕನ್ನಡಿಗರೆದೆಯು ದೌರ್ಬಲ್ಯವಿದು ದಾಕ್ಷಿಣ್ಯ
ಕರ್ತವ್ಯ ಚ್ಯುತಿ ಮತ್ತೆ ನಗ್ನ ಔದಾಸೀನ್ಯ !

೨

ಇತ್ತ ಅಕ್ಕಲಕೋಟೆ ದಕ್ಷಿಣದ ಸೊನ್ನಲಿಗೆ
ಇತ್ತ ಕಾಸರಗೋಡು ಆಲೂರು ಆದ್ವಾನಿ
ಮತ್ತೆ ಮೂದೆಸೆಗಳಲಿ ಹೊರತಾಗಿ ಹೋಗಿರ್ಪ
ಲಕ್ಷೋಪಲಕ್ಷ ಕನ್ನಡರ ಕರುಳಿನ ಬಳಗ,

ಬಳಲುತಿರೆ ಬಲು ಕೊರಗಿ ಅನ್ಯರಾಶ್ರಯದಲ್ಲಿ
ತಾಯ ತೊಡೆಯನ್ನಗಲಿ ಮನೆಮಠಕೆ ಎರವಾಗಿ
ಲೋಕಶಾಸನ ವಿಧಿತ ವಜ್ರಬಂಧನದಲ್ಲಿ
ನೆಲದ ನೇಹವನುಳಿದು ಕುಲದ ಛಲವನು ಮರೆದು

ದೇಸಿಗರು ತಾವಾಗಿ ಅಸಹಾಯಕೆಡೆಯಾಗಿ
ತಾಯ ನೇಹದ ಸೊಲ್ಲ ಕೇಳುವದೆ ! ಹಾ ! ಇಲ್ಲ !
ಬಗೆಯ ಬಿಚ್ಚಲು ಕಣ್ಣು ಹನಿಯಾಡುತಿಹುದಲ್ಲ
ಕೆಂದಮ್ಮಗಳನಗಲಿ ಕನ್ನಡಮ್ಮನ ಬಸಿರು

ಕುಲುಮೆಯಾಗಿದೆ ಎದೆಯು ಊದುತಿದೆ ಬಿಸಿಯುಸಿರ !
ಅವಳ ಶಾಂತಿಯು ಗುರಿಯು ನಮ್ಮ ಪಾಲಿನ ಸ್ವರ್ಗ !

# ಸ್ವರ್ಗದಲ್ಲಿ ಸೋಮಾರಿ

ಲೇಖಕರು:-**ಪ್ರೊ. ಎ. ಕೆ. ರಾಮಾನುಜನ್,** ಎಮ್. ಎ
ಲಿಂಗರಾಜ ಕಾಲೇಜ, ಬೆಳಗಾವಿ.

ಆ ಮನುಷ್ಯನಿಗೆ ಏನೂ ಕೆಲಸವಿರಲಿಲ್ಲ ಏನೇನೊ ಹವ್ಯಾಸಗಳಿದ್ದವು. ಸಣ್ಣಪುಟ್ಟ ವಸ್ತುಗಳ ಕುಸುರಿಗೆಲಸವನ್ನು ಪರಿಪೂರ್ಣಗೊಳಿಸುವುದರಲ್ಲಿ ಅವನ ಬಾಳೀ ಮುಗಿದು ಹೋಯಿತು. ಆದ್ದರಿಂದ, ಅವನು ಸ್ವರ್ಗಕ್ಕೆ ಹೋದಾಗ ಅವನಿಗೆ ಆಶ್ಚರ್ಯವಾಯಿತು.

ಆದರೆ ದೇವದೂತ ಮರೆತು, ಇವನನ್ನು ಬೇರೊಂದು ಸ್ವರ್ಗಕ್ಕೆ, ಕೆಲಸ ಗಿಲಸ ಮಾಡಿ ಸ್ವರ್ಗ ಗಿಟ್ಟಿಸಿದವರ ಸ್ವರ್ಗಕ್ಕೆ, ಕರೆದು ತಂದಿದ್ದ.

ಈ ಸ್ವರ್ಗದಲ್ಲಿ ನಮ್ಮವನು ಬೀದಿ ಬೀದಿಗಳಲ್ಲಿ ಅಲೆದಾಡುತ್ತಿದ್ದ. ಇವನ ನಡೆದಾಟದಿಂದ ಎಲ್ಲರ ಕಾರ್ಯವೂ ಕೆಡುತ್ತಿತ್ತು.

ಬಿತ್ತಿದ ಬೆಳೆಯಮೇಲೆ ಕಾಲಿಟ್ಟೆಯಲ್ಲಾ ಎಂದು ಯಾರೋ ಬೈದರು. ಬೆದರಿ ಒಂದು ಕಡೆಗೆ ಸರಿಯಲು, ಇನ್ನಾರೋ ಹಿಡಿದು ತಳ್ಳಿದರು. ಹಾಗೂ ಹೀಗೂ, ಈ ಕೆಲಸದ ಸಂತೆಯಲ್ಲಿ ಅತ್ತಿತ್ತ ದೂಡಿಸಿಕೊಳ್ಳುತ್ತ, ಮುಂದೆ ಸಾಗಿದ.

ಸುಟಿಯಾಗಿ ಕಾರ್ಯಮಗ್ನಳಾಗಿದ್ದ ಹುಡುಗಿಯೊಬ್ಬಳು ಬಾವಿಯಿಂದ ನೀರು ತರಲು ಅಲ್ಲಿಗೆ ಬಂದಳು. ವೀಣೆಯ ತಂತಿಗಳ ಮೇಲೆ ನಿಪುಣೆಯ ಕೈಬೆರಳುಗಳು ಸರಿದಾಡುವಂತೆ ಅವಳ ಪಾದಗಳು ರಸ್ತೆಯ ಮೇಲೆ ಕುಣಿದು ಬಂದವು. ಅವಸರದಲ್ಲಿ, ತಲೆಗೂದಲನ್ನು ಹೇಗೆ ಹೇಗೋ ಮುಡಿದು ಕೊಂಡಿದ್ದಳು. ಮುಡಿಗೆ ಸಿಕ್ಕದ ಕುರುಳುಗಳು ಹಣೆಯಮೇಲೆ ಕುಪ್ಪಳಿಸಿ ಅವಳ ಕಣ್ಣು ಕಪ್ಪನ್ನು ಇಣಿಕಿ ನೋಡುತ್ತಿದ್ದವು.

ಅವನು ಅವಳನ್ನು ನೋಡಿ, 'ನಿನ್ನ ಗಡಿಗೆಯನ್ನು ಒಂದು ನಿಮಿಷ ಕೊಡುತ್ತೀಯಾ ? ' ಎಂದ.

'ಗಡಿಗೆಯೇ? ಏಕೆ, ನೀರು ಸೇದಬೇಕೇ?' ಎಂದು ಅವಳು ಕೇಳಿದಳು.

'ಇಲ್ಲ, ಚಿತ್ರಗೆಲಸಮಾಡುವುದಕ್ಕೆ '.

'ಹುಂ! ಚೆನ್ನಾಯಿತು. ಕೈತುಂಬ ಕೆಲಸವಿದೆ, ಇದಕ್ಕೆಲ್ಲ ಕಾಲವಿಲ್ಲ' ಎಂದು ಆಕೆ ತಿರಸ್ಕಾರದಿಂದ ನುಡಿದು ಹೋದಳು.

ಆದರೆ ಏನೇ ಆಗಲಿ, ಕಾರ್ಯಮಗ್ನರಾದ ಬಡಪಾಯಿಗಳೆಲ್ಲ ಶತ ಸೋಮಾರಿಯೆದುರಿಗೆ ಕಡೆಗಾದರೂ ಸೋಲೊಪ್ಪಿಕೊಳ್ಳಲೇಬೇಕು.

ದಿನವೂ ಅವಳು ಬಾವಿಕಟ್ಟೆಗೆ ಬಂದಾಗಲೆಲ್ಲ ಅವನೂ ಅಲ್ಲಿರುತ್ತಿದ್ದ. ದಿನವೂ ಅದೇ ಪ್ರಶ್ನೆ, ಅದೇ ಬೇಡಿಕೆ, ಅದೇ ಮುನಿಸಿನ ಉತ್ತರ. ಕಡೆಗೊಂದು ದಿನ ಆಕೆ ಬೇಸತ್ತು ಅವನ ಬೇಡಿಕೆ ಸಲ್ಲಿಸಿದಳು.

ನಮ್ಮವನು ಗಡಿಗೆಯನ್ನೆತ್ತಿಕೊಂಡು, ವಿಲಕ್ಷಣ ವರ್ಣಗಳನ್ನು ಬಳಸಿ ವಿಧವಿಧವಾದ ರೇಖೆಗಳನ್ನು ಎಳೆದು ಏನೇನೊ ವಿನ್ಯಾಸಗಳನ್ನು ರಚಿಸಿದ.

ಹುಡುಗಿ ಅದನ್ನು ಕೈಯಲ್ಲಿ ಹಿಡಿದು ತಿರುಗಿಸಿ, 'ಇದಕ್ಕೆಲ್ಲ ಏನರ್ಥ?' ಎಂದು ಪ್ರಶ್ನಿಸಿದಳು.

'ಇದಕ್ಕೆಲ್ಲ ಅರ್ಥವಿಲ್ಲ' ಎಂದು ಉತ್ತರ ಹೇಳಿದ.

ಅವಳದನ್ನು ಮನೆಗೆ ತೆಗೆದುಕೊಂಡು ಹೋದಳು. ಅದನ್ನು ಬೇರೆಬೇರೆ ಬೆಳಕಿನಲ್ಲಿ ಎತ್ತಿ ಹಿಡಿದು, ಅದರ ಮರ್ಮವನ್ನು ಅರಿಯಲು ಯತ್ನಿಸಿದಳು.

ನಟ್ಟಿರುಳಿನಲ್ಲೆದ್ದು, ದೀಪಹಚ್ಚಿ, ಎಲ್ಲ ದೃಷ್ಟಿಕೋನಗಳಿಂದಲೂ ಅದನ್ನು ಪರಿಶೀಲಿಸಿದಳು.

ಅರ್ಥವಿಲ್ಲದ ವಸ್ತುವನ್ನು ಅವಳು ನೋಡಿದ್ದು ಇದೇಮೊದಲು. ಮರುದಿನ, ಅವನು ಬಾವಿಯ ಹತ್ತಿರವೇ ನಿಂತಿದ್ದ. ಅವಳು, 'ನಿನಗಿನ್ನೇನು ಬೇಕು ?' ಎಂದಳು.

'ನಿನಗಿನ್ನಷ್ಟು ಕೆಲಸ ಮಾಡಿಕೊಡಬೇಕು,' ಎಂದ.

'ಏನು ಕೆಲಸ ?'

'ನಿನ್ನ ತುರುಬು ಕಟ್ಟುವುದಕ್ಕೆ, ಬಣ್ಣದ ಎಳೆಗಳನ್ನು ನೆಯ್ದು ದಾರ ಮಾಡಿ ಕೊಡುತ್ತೇನೆ' ಎಂದ.

‘ ಇದಕ್ಕೇನಾದರೂ ಅಗತ್ಯವಿದೆಯೇ ?’ ಎಂದಳು ಅವಳು.

‘ ಅಗತ್ಯ ಏನೇನೂ ಇಲ್ಲ ’ ಎಂದು ಅವನೊಪ್ಪಿಕೊಂಡ.

ಬಣ್ಣದ ದಾರ ಸೃಷ್ಟಿಯಾಯಿತು. ಅಂದಿನಿಂದ ಅವಳು ತುರುಬು ಕಟ್ಟುವದಕ್ಕೆ ಬಹಳಕಾಲ ವೆಚ್ಚಮಾಡುತ್ತಿದ್ದಳು.

ಕಾಲವನ್ನೆಲ್ಲ ಕ್ರಮವಾಗಿ, ಕಾರ್ಯೋನ್ಮುಖವಾಗಿ ಉಪಯೋಗಿಸಲೆಂದೇ ರಚಿಸಿದ ಆ ಸ್ವರ್ಗದಲ್ಲೂ ಅಲ್ಲಲ್ಲಿ ಹರಕು ಮುರುಕು ಕಾಣಿಸತೊಡಗಿತು.

ಹಿರಿಯರೆಲ್ಲ ಚಿಂತೆಗೊಳಗಾದರು. ಸಭೆಸೇರಿದರು. ದೇವದೂತ, ತಾನು ಮಾಡಿದ ತಪ್ಪನ್ನೊಪ್ಪಿಕೊಂಡ. ಯಾರನ್ನೊ ಎಲ್ಲಿಗೊ ಕರೆತಂದೆ ನೆಂದು ವ್ಯಥೆಪಟ್ಟ

ದಾರಿತಪ್ಪಿ, ಈ ಸ್ವರ್ಗಸೇರಿದ ಅವನನ್ನು ಸಭೆಗೆ ಕರೆತಂದರು. ಬಣ್ಣ ಬಣ್ಣದ ರುಮಾಲೊಂದು ಅವನ ತಲೆಯ ಮೇಲೆ ಮೆರೆಯುತ್ತಿದ್ದುದನ್ನು ನೋಡಿದಾಗಲೇ, ಇವನು ಇಲ್ಲಿಗೆ ತಕ್ಕವನಲ್ಲ ಎಂದು ಅವರಿಗೆಲ್ಲ ಮನ ದಟ್ಟಾಯಿತು. ಎಂತಹ ತಪ್ಪಾಗಿ ಹೋಯಿತು !

ಹಿರಿಯರ ಮುಖಂಡನೆಂದ, ‘ ನೀನಿನ್ನು ಮರ್ತ್ಯಲೋಕಕ್ಕೆ ಹೋಗಿ ಬಿಡಬೇಕು. ’

ಅವನು ಸಂತೋಷದಿಂದ, ಈಗಲೇ ಸಿದ್ಧ’ ಎಂದ. ಬಣ್ಣದದಾರ ಗಳಿಂದ ತುರುಬು ಕಟ್ಟಿಕೊಂಡ ಹುಡುಗಿ, ‘ ನಾನೂ ಹೋಗುತ್ತೇನೆ’ ಎಂದು ದನಿಗೂಡಿಸಿದಳು.

ಅರ್ಥವೇ ಇಲ್ಲದ ಈ ಸಂದರ್ಭದಿಂದ ಹಿರಿಯರಿಗೆಲ್ಲ ಬುದ್ಧಿ ಭ್ರಮೆ ಯಾಯಿತು.

( ರವೀಂದ್ರನಾಥ ಠಾಕೂರರ ಕಿರುಗತೆ:
III. XXVI, The Fugitive)

# ರಸಿಕರಂಗರಿಗೆ

## ( ರಂ. ಶ್ರೀ. ಮುಗಳಿಯವರಿಗೆ )

ಕಲ್ಪನೆಯ ಬಾನಿನಲಿ ಹೊಳೆಯುತಿಹ ಭಾನು
ಕಾವ್ಯ ಸುಮ ಸಂಚಯದಿ ಸುರಿಯುತಿಹ ಜೇನು
ಕೋಟಿ ಜನಮನ ಮಿಡಿವ ವೀಣೆಗಾರನು ನೀನು
ಭಾವದಲಿ ಭವ್ಯತೆಯ ಕಂಡಿರುವ ಕವಿ ನೀನು ||೧||

ಕನ್ನಡದ ಸಂಸ್ಕೃತಿಯ ಕನ್ನಡಿಸಿದ ಸಾಹಿತಿ
ಕನ್ನಡಿಗರಭಿಮಾನವರಳಿಸುವ ಮಹತ್ಕೃತಿ
ಮೂಡಿ ಬರೆ ಕಾರಣವು ನಾಡಪ್ರೀತಿ
ನಿನ್ನ ಸೇವೆಗೆ ಮೆಚ್ಚಿ ಬಂದಿತಹ ಪ್ರಶಸ್ತಿ ||೨||

'ಹೊಸಕಾಲದ ನವಿಲ' ಜತೆಗೂಡಿದ ರಸಿಕ
ಹಳೆತಿನ ಜೊತೆ ಹೊಸತನು ಬೆರೆಸುತ್ತಿಹ ಯುವಕ
ಮುನ್ನಡೆಯುವ ಕನ್ನಡಿಗನೆ ನೀನಿರೆ ಕಾರಣಿಕ
ಎಲ್ಲಾ ಜನ ಅಂತಾವರೆ ದೂರಿಲ್ಲವೊ ನಾಕ! ||೩||

—**ಶಾಮ ಶಮನೇವಾಡಿ.**

# ಸ್ವಪ್ನಭಂಗ

'ದೇವನ ಅಡಿಯನು ಸೇರುವೆನೆ'ಂದು
ಹಿಗ್ಗುತಲಿದ್ದಿತು ಹೂವೊಂದು
'ದೇವರ ಪ್ರೀತಿಗೆ ಪಾತ್ರನು ಆಗಿ
ಅವನ ಚರಣದಲಿ ಶಿರವನು ಬಾಗಿ
ಸೇರುವೆ ನಾನು ಸ್ವರ್ಗವನು
ಹಿಡಿಯುವೆ ಸುಖದಾ ಮಾರ್ಗವನು'
ಹೀಗೆ ವಿಚಾರವು ಸಾಗುತಲಿರಲು
ಝೇಂಕರಿಸುತ ಬಳಿ ಭ್ರಮರವು ಬರಲು
ಮುಂದಿನ ನೆನಪದು ಹೋಯಿತು ಹಾರಿ
ಭೂಮಿಯನಪ್ಪಿತು ಹೂವದು ಜಾರಿ!

—**ಶಾಂತಿನಾಥ ಪಾಟೀಲ**, ಬೆಳಗಾವಿ.

# ಅನಾಥೆ

ಲೇಖಕರು:–ಶ್ರೀ. ರಾಜಾರಾಮ ಮಜಲೀಕರ, ಗೋಕಾಕ.

“ಶಿವಾ ಎಂಥೆಂತಾವ್ರಿಗೆ– ಎಂಥೆಂತಾ ಹೊತ್ತು ತರ್ತಾನನ್ನೋದು ಹೇಳಾಕಾಗ್ತದಾ ರಾಮಣ್ಣ? ಇಃ ಪ್ರಪಂಚದಾಗ ಯಾವ್ದು ಸ್ತಿರಾ ಅಂತ ತಿಳಕೊಳ್ಳಿ ಹೇಳು?”

ಗಂಭೀರವಾಗಿ ಹೇಳುತಿದ್ದಳು ಪಾರ್ವತಿ. ಯಾವುದೋ ಮಹಾ ಮೌನದಲ್ಲಿ ಮುಳುಗಿದ ಮನಸು ಹೃದಯದಂತರಾಳದಿಂದ ದನಿ ತೂರುತಿತ್ತು. ದೃಷ್ಟಿ ಶೂನ್ಯವಾಗಿ ಎದುರಿನ ಗೋಡೆಯನ್ನು ನಿಟ್ಟಿಸುತಿತ್ತು.

ಚಿಕ್ಕದಾದ ಕೋಣೆ–ನಡುವೆ ಹರಕು ಸೀರೆಯ ತುಂಡು ಇಳಿಬಿಟ್ಟು ಅದನ್ನೇ–ಎರಡು ಭಾಗ ಮಾಡಲಾಗಿದೆ. ಒಂದುಕಡೆ ಅಡಿಗೆಮನೆ–ಬಚ್ಚಲು; ಇನ್ನೊಂದು ಭಾಗ ಪಡಸಾಲೆ; ಮಲಗುವ ವ್ಯವಸ್ಥೆಯಲ್ಲಾ ಅಲ್ಲೇ. ಎಂದೋ ಹತ್ತು ವರ್ಷದ ಹಿಂದೆ–ಸುಣ್ಣದ ಸಾರಣೆ ಮಾಡಿದ ಗೋಡೆ ಹತ್ತಾರು ಕಡೆ ಹಕಳೆ ಕಳಚಿ ವಿಕಾರವಾಗಿದೆ. ಹೊಗೆಯಿಂದ ಕಪ್ಪಾಗಿದೆ. ತಗಣೆ ಒರಿದು ಕೆಂಪು ಬಣ್ಣದಿಂದ ವಿದ್ರೂಪವಾಗಿದೆ. ಅದು ಪಾರ್ವತಿಯ ನಿವಾಸಸ್ಥಾನ.

ಒಂದು ಕಡೆ ಗೋಡೆಗೆ ಆತು ಪಾರ್ವತಿ ಕುಳಿತಿದಾಳೆ. ನೆಲದಮೇಲೆ ಅವಳಿಂದ ತುಸು ದೂರ ರಾಮಣ್ಣ ಚಿಂತೆಯ ಹೊರೆ ಹೊತ್ತು, ಗತಕಾಲದ ಪಾರ್ವತಿಯ ಸುಂದರ ಜೀವನದೊಡನೆ ಇಂದಿನ ಈ ಅಸಹ್ಯ ಬಾಳನ್ನು ಹೋಲಿಸಿ ಕಳವಳ ಪಡುತಿದಾನೆ. ಹೃದಯದ ತಾಂಡವ ತಪ್ತ ಭಾವನೆ ಮುಖದ ಮೇಲೆ ಮೂಡಿ ನರ್ತಿಸುತಿತ್ತು. ಪಾರ್ವತಿಯ ಮಾತು ಅವನಿಗೆ ದೂರದ ಬಾಣ ವೇಗವಾಗಿ ಬಂದು ಹೃದಯ ಭೇದಿಸುವಂತೆನಿಸುತಿತ್ತು.

ಎಡಗೈಯಲ್ಲಿ ಸೀರೆಯ ಸೆರಗಿನಿಂದ ಕಣ್ಣೀರೊರಿಸಿಕೊಂಡು ಊಹ್ಞುಂ! ಕಣ್ಣೀರವರೆಗೆ ಸೆರಗು ಬರುತ್ತಿರಲಿಲ್ಲ. ಸೆರಗಿದ್ದಲ್ಲೆ ಮುಖ ಬಾಗಿಸಿ ಕಣ್ಣೀರೊರಸಿಕೊಂಡು ಪಾರ್ವತಿ ಹೇಳಿದಳು.—

" ದೇವರಿಗಿಟ್ಟ ನೀವದ್ದೀ ನಾಯಿಗೆ ನೀಡಬೇಕಾಯ್ತಲ್ಲಾ-ರಾಮಣ್ಣಾ! ಎಂಥಾ ನಾಯಿ ಬಾಳಾತ್ನಂದು ! ಇೀ ಜೀವ ಬ್ಯಾಸರಾಗಿ-ಭಾವೀರೆ ಬಿಳ್ಳೀ ಅಂತಾ ಇಚಾರ ಮಾಡ್ತೀನಿ."

ಬಿಗಿದು ಬಂದ ಕಂಠದಲ್ಲಿ ಮಾತು ತಡವರಿಸುತಿತ್ತು. ಸಲ್ಪ ತಡೆದು ಹೇಳಿದಳು ಪಾರೋತಿ-

"........ಆ ಯತ್ನಾನೂ ಮಾಡಿ ನೋಡೀನಿ ರಾಮಣ್ಣಾ. ಆದ್ರ ಸಾವಿಗಿ ಮನಸ ಗಟ್ಟಿ ಮಾಡಿದಂತೆಲ್ಲ ಬದುಕಬೇಕೆನ್ನೋ ಹಟಾ ಅದಕಿಂತಾ ಗಟ್ಟಿಯಾಗಿ ಬೆಳೀತೈತಿನೋಡು. ಇೀ ಹಾಳು ಹೊಟ್ಟೀಯರೆ ಯಾಕ ಕೊಟ್ನೋ ಸುಡುಗಾಡು ಶಿವಾ."

ಅಯ್ಯೋ ! ಎಂಥಾ ಕಠೋರ ಅನುಭವ. ಹೃದಯವಿದ್ದವರ ಹೃದಯ ಸೀಳಿ ಪುಡಿಪುಡಿ ಮಾಡುವ ಇೀ ದಾರುಣ ಬಾಳಿಗೆ ಯಾರು ಹೊಣೆ ?-ಯಾರು ಹೊಣೆ ಇೀಕೆಯನ್ನು ಇೀ ರೌರವ ನರಕಕ್ಕೆ ದೂಡಲು ?

ರಾಮಣ್ಣನ ಕಣ್ಣಿನೆದುರು ಸಮಗ್ರವಾಗಿ ಆ ಬದುಕನ್ನು ಬಾಳುವವರ ಕೋಟಿ ಕೋಟಿ ಚಿತ್ರಗಳು ಬಂದು ನಿಂತವು. ಆ ನೋವು, ಆ ಅಸಹ್ಯ ಜೀವನ, ನಿತ್ಯ ನರಕದ ನಿಟ್ಟುಸಿರು- ನರಳಾಟ-ಕೇಕೆ ವಿಕಟಾಟ್ಟಹಾಸ-ಹೋ....ೀ....ೀ....ೀ....ೀ....ೀ ಭಯಂಕರ ಪ್ರಳಯದ ಪ್ರಚಂಡ ವರ್ತುಲ, ಆ ವರ್ತುಲದಲ್ಲಿ ಒಂದು ಅಣುವಾಗಿ ಹೊರಳಾಡುವ ಪಾರೋತಿ, !

" ಪಾರೋತೀೀೀೀ...ೀ...ೀ.."

ರಾಮಣ್ಣ ಕುಳಿತಲ್ಲಿಯೇ ಕೂಗಿದ. ಆ ಕೂಗು, ಭಾವನೆಯ ವಿಸ್ತಾರವಾದ ಆಳವಾದ ತಳದಿಂದ ಅವನನ್ನು ವಾಸ್ತವ ಪ್ರಪಂಚಕ್ಕೆ ತಂದಿತು. ಎದುರಿಗೆ ನೋಡುತಾನೆ ಪಾರೋತಿ ತನ್ನ ತಂಗಿಯಂತೆ ತಂಗಿಗಿಂತಲೂ ಹೆಚ್ಚು ನಡೆದುಕೊಂಡ ಪಾರೋತಿ, !

ಆಕೆಯ ಮುಖ ಬಾಡಿದೆ. ಕೆನ್ನೆಯ ಮೂಳೆ ಮುಂದೆ ಚಾಚಿವೆ. ಒಣಗಿದ ರಸಹೀನ ತುಟಿ ಬಿಳಿಚಿಕೊಂಡಿವೆ. ಕಣ್ಣಿನಲ್ಲಿಯ ಕಾಂತಿ ಕಂದಿ

ನಿಸ್ತೇಜವಾಗಿದೆ. ಅರ್ಥ ಕೂದಲು ಬಿಳುಪಾಗಿವೆ ಮುಖ ಬಾಡಿ ಒಣಗಿದ ಮಲ್ಲಿಗೆ ಹೂವಿ ನಂತಾಗಿದೆ

ಅಂದು–ಒಂದು ಕಾಲದಲ್ಲಿ–ಅದು ಇೀಗ– " ಒಂದು ಕಾಲವಾಗಿದೆ " ಆಗ ಪಾರ್ವತಿ ಎಷ್ಟೊಂದು ಸುಂದರಿಯಾಗಿದ್ದಳು ? ಅಂದು–

ಪಾರ್ವತಿ ಮದುವಣಗಿತ್ತಿಯಾಗಿ ಶಿವಣ್ಣನೊಂದಿಗೆ ಜೋಡು ಕುದುರೆಯ ಸಾರೋಟಿನಲ್ಲಿ ಕುಳಿತು ಮೆರವಣಿಗೆಯಲ್ಲಿ ಹೊರಟಾಗ ......ಆಗ ಎಷ್ಟೊಂದು ಸುಂದರಿಯಾಗಿ ಲಕ್ಷ್ಮಿಯಂತೆ, ಊಹ್ಞೂಂ-ಲಕ್ಷ್ಮಿಯನ್ನೂ ನಾಚಿಸುವಂತೆ ಕಾಣಿಸುತಿದ್ದಳು. ತಲೆಗೆ ಬಾಸಿಂಗ, ಮುತ್ತಿನದಂಡೆ, ನವಯೌವನದ ಭವ್ಯ ಹೊಸ್ತಿಲಲ್ಲಿ ನಿಂತ ಅವಳ ವಯಸ್ಸು, ವಯಸ್ಸಿಗೆ ತಕ್ಕ ಗಾಂಭೀರ್ಯ, ಗಾಂಭೀರ್ಯಕ್ಕೆ ತಕ್ಕ ಮುಗುಳು ನಗೆ, ನಕ್ಕಾಗ ಸಾಲಾಗಿ ಕಾಣಿಸುವ ಸ್ಫಟಿಕದಂತಹ ದಂತ ಪಂಕ್ತಿ. ಎಂಥ ಆನಂದ ಲಾಸ್ಯವಾಡುತಿತ್ತು ಅವಳ ಮುಖದಲ್ಲಿ !

ಶಿವಣ್ಣನೂ ಅಷ್ಟೆ, ಎಷ್ಟು ಪ್ರಿತಿಯಿಂದ ಕಾಣುತಿದ್ದ ಅವಳನ್ನು !
ಪ್ರಿ ?

ಥತ್ ! ಅದು ಪ್ರೀತಿಯೇ ?- ಅಲ್ಲ ಕಾಮ ಹೆಣ್ಣಿನ ರೂಪಕ್ಕೆ, ಸೌಂದರ್ಯಕ್ಕೆ, ಚೆಲುವಿಕೆಗೆ ಮನಸೋತು. ಅದರಲ್ಲಿ ತನ್ನ ಬಯಕೆಯ ತೃಪ್ತಿ ಪಡೆಯಲು ತೋರಿಸುವ ಭಯಂಕರ ವಂಚನೆಯ ವಿದ್ರೂಪ ಪಶು. 'ಪ್ರೀತಿ'ಯ ಮುಖವಾಡ ಧರಿಸಿ ಹೆಣ್ಣಿನ ಬಾಳನ್ನು ಹಾಳು ಮಾಡುವ ಕೀಳು ಪ್ರ್ವಗ.

ಎಲ್ಲ ಗಂಡೂ ಅಷ್ಟೆಯೆ ? ಹೆಣ್ಣಿನಲ್ಲಿ ರೂಪ–ಸೌಂದರ್ಯ–ಚೆಲುವಿಕೆ ಯೌವನ ಇರುವ ವರೆಗೆ ಆಕೆಯ ದಾಸನಾಗಿ, ಬಾಡಿದ ಹೂ ಬಿಸುಡುವಂತೆ, ಉಂಡ ಎಲೆ ತಿಪ್ಪಿಗೆಸೆಯುವಂತೆ ಹೆಣ್ಣಿನ ಸೌಂದರ್ಯ ಕೊಂಚ ಕಡಿಮೆಯಾದರೆ ತಿರಸ್ಕರಿಸುವುದು ಗಂಡಸಿನ ಸ್ವಭಾವವೆ? ಪ್ರೀತಿಯ ಮುಖವಾಡ ತೊಟ್ಟು ಅದರ ಹಿಂದೆ ತನ್ನ ಕೀಳು ಕಾಮನೆಯನ್ನು ತೃಪ್ತಿ ಪಡಿಸಿಕೊಳ್ಳುವ ಹೃದಯಹೀನ ಪಾಶವೀ ವೃತ್ತಿಯೇ ಗಂಡಸಿನದು ?

ಛೆ! ಹಾಗಿರಲಾರದು ಎಲ್ಲರೂ ಶಿವಣ್ಣನಂಥವರೆಯೇನು? ನಿಜವಾದ ಪ್ರೀತಿಯು ಹೂ ಅರಳುವದು ತ್ಯಾಗದಲ್ಲಿ. ರೂಪದಲ್ಲಿ ಹುಟ್ಟಿದಷ್ಟೇ ಪ್ರೀತಿ ವಿದ್ರೂಪದಲ್ಲಿಯೂ ಹುಟ್ಟಬಲ್ಲದು. ಆದರೆ ಆ ಬಗೆಯ ಪ್ರೀತಿಯೆಷ್ಟು ಜನರಿಗೆ ಸಾಧ್ಯ?

ಹಾಗೆ ಸಾಧ್ಯವಿಲ್ಲವೆಂದು ಪಾರೋತಿಯನ್ನು ಇೀ ದಾರಿಗೆ ದೂಡುವುದೇ? ಶಿವ-ಶಿವ! ಎಂಥ ಭಯಂಕರ ಅನ್ಯಾಯ! ಹೌದು—

"ಅನ್ಯಾಯ—ಅನ್ಯಾಯ"

—ಎಂದು ರಾಮಣ್ಣ ಕುಳಿತಲ್ಲಿಯೇ ಕನವರಿಸಿದ.

"ಅನ್ಯಾಯದ್ದ ऽ ಮೇಲಗೈ ಇದ್ದಾಗ ನ್ಯಾಯ—ಅನ್ಯಾಯ ಯಾರ ಇಚಾರ್ಸತಾರ ರಾಮಣ್ಣಾ?"

—ಎಂದು ಕಹಿಯಾಗಿ ನುಡಿದಳು ಪಾರೋತಿ.

"ಶಿವಣ್ಣ ಹಿಂಗ ಮಾಡಬಾರ್ದಾಗಿತ್ತು ಪಾರಕ್ಕ"

"ಮಾಡಿದ್ನಲ್ಲ?"

ತಿರಸ್ಕಾರದ ದನಿಯಿಂದ—ತುಟಿಗಳನ್ನು ವಿಕಟವಾಗಿ ಮುಡಚಿ-ತೂರಿದಳು.

"......ಮಾಡಬಾರದಾಗಿತ್ತು. ನನಗ್ಗೊತ್ತು ರಾಮಣ್ಣಾ, ನೀನು ಹೇಳೋದೂ ಅಷ್ಟೆ, ಇೀ ಪರಪಂಚ ಹೇಳೋದೂ ಅಷ್ಟೆ. ಇದಕಿಂತಾ ಹೆಚ್ಚು ಏನೂ ಇೀ ಲೋಕ ಹೇಳೋದಿಲ್ಲಾಂತ ನನಗ್ಗೊತ್ತು. ಬೆಳಕಿನಾಗಿಂದ ಕತ್ತಲ್ಲೂಪಕ್ಕ ದೂಡಿ ಕತ್ತಲ್ಲೂಪದಾಗ ಅದರ ಜೋಡಿ ಚಕ್ಕಂದಾಡಿ ಹೋಗೋ ಇೀ ಜನಾ ಇದಕೂ ಹೆಚ್ಚು ಏನು ಹೇಳೀತು ಹೇಳು?"

ಪಾರೋತಿಯ ಹೃದಯಾಗ್ನಿಯಿಂದ ಸಿಡಿಯುತ್ತಿದ್ದ ಆ ಮಾತಿನ ಕಿಡಿ ರಾಮಣ್ಣನ ಮರ್ಮವನ್ನೇ ಸುಡುತಿದ್ದವು. ಆದರೂ ರಾಮಣ್ಣ ಉದ್ರೇಕಗೊಳ್ಳಲಿಲ್ಲ. ಏಕೆಂದರೆ ಪಾರೋತಿಯ ಮಾತು ಸತ್ಯವಾಗಿತ್ತು-ಕಠೋರಸತ್ಯ.

ದೈವ ಪಾರೋತಿಯಲ್ಲಿ ತನ್ನ ರೂಪರಾಶಿಯನ್ನೇ ಸೂರೆ ಮಾಡಿತ್ತು. ಕೆಲದಿನಗಳಲ್ಲಿ ಅದನ್ನು ದೋಚಿಕೊಂಡೂ ಹೋಯಿತು. ದೈವ ಕೊಟ್ಟರೂಪ ದೈವ ಕಸಿದುಕೊಂಡು ಹೋಯಿತು. ಆದರೆ ನಿರಪರಾಧಿನಿಯಾದ ಪಾರೋತಿ

ಪಡಬಾರದ ಕಷ್ಟಕ್ಕೆ ಗುರಿಯಾದಳು.

ಸಿಡುಬಿನ ಬೇನೆ ಬಂದು ಆ ಊರಿನ ಅನೇಕರನ್ನು ಬಲಿ ತೆಗೆದುಕೊಂಡು ಕಸಿದುಕೊಂಡುಹೋಯಿತು. ಆದರೆ ಪಾರೋತಿಯನ್ನ ಮಾತ್ರ ತನ್ನ ವಿಜಯದ ಸ್ಮಾರಕವೆಂಬಂತೆ ಬದುಕಿಸಿತು. ಮುಖವೆಲ್ಲ ಹುಳುಕಾದ-ಒಂದು ಕಣ್ಣು ಮೆಳ್ಳಾದ ಪಾರೋತಿ ಇದ್ದೂ ಸತ್ತಂತೆ ಎನಿಸಿದಳು ಗಂಡನಿಗೆ ಸತ್ತು ಹೋದರಾದರೂ ಉತ್ತಮ ಎನಸಿದಳು.

ಶಿವಣ್ಣ ಆಕೆಯನ್ನು ಪ್ರೀತಿಯ ಬದಲು ತಿರಸ್ಕಾರದಿಂದ ಕಾಣತೊಡಗಿದ. ಅಷ್ಟೇಅಲ್ಲ, ಅವಳನ್ನು ಮನೆಯಲ್ಲಿ ಇಟ್ಟುಕೊಳ್ಳುವುದೂ ಅವಮಾನವೆಂದು ಭಾವಿಸ ತೊಡಗಿದ. ಅದರ ಫಲವಾಗಿಯೇ ಪಾರೋತಿ 'ಸೋಡಚೀಟಿ' ಯೊಂದಿಗೆ ಮನೆಯಿಂದ ತಳ್ಳಲ್ಪಟ್ಟಳು.

ಅನಾಥೆಯಾದ ಹೆಣ್ಣು ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲು ತನ್ನ ಮಾನವನ್ನು ಮಾರಾಟಕ್ಕೆ ಹಚ್ಚಲು ಸಿದ್ಧಳಾದಳು—ಹಸಿವಿನ ಪ್ರಾಬಲ್ಯಕ್ಕೆ ತಲೆಬಾಗಿ.

ಒಂದು ಕಾಲದಲ್ಲಿ ಒಬ್ಬನ ಮಡದಿಯಾಗಿ-ಗರತಿಯಾಗಿ-ಗೃಹಲಕ್ಷ್ಮಿಯಾಗಿ ಮನೆಬೆಳಗಿದ ಗೌರಿ ಹಸಿವಿನ ದಾಹಕ್ಕಾಗಿ ನಾಯಿಯಾದಳು ಮಹಾಕಾಳಿಯಾದಳು—ದುರ್ಗೆಯಾದಳು-ಕೊನೆಗೆ ಸೂಳೆಯಾದಳು. ಅನಾಥೆಯಾದ ಹೆಣ್ಣು ತನ್ನ ಹತ್ತಿರ ವಿದ್ದ ಒಂದೇ ಒಂದು ವಸ್ತು—ಶೀಲ—ಆದನ್ನು ಪಣಕ್ಕಿಟ್ಟು ಬದುಕಲು ಯತ್ನಿಸಿದಳು.

ಲೋಕ ಅವಳನ್ನು ಬಹಿಷ್ಕರಿಸಿತು. ಸಮಾಜ 'ಸೂಳೆ' ಎಂದು ನಾಮಕರಣ ಮಾಡಿತು. ಅವಳ ಸಹವಾಸ ಸಭ್ಯತೆಗೆ ಕೇಡು ಎಂದು ಅವಳನ್ನು ಕತ್ತಲೆಯಲ್ಲಿ ದೂಡಿತು.

—ಕತ್ತಲೆಯಲ್ಲಿ ದೂಡಿತು ಅವಳ ಸಹವಾಸ ಲೋಕಕ್ಕೆ ಕಾಣಬಾರದೆಂದು. ಅವಳ ಸಹವಾಸ ಲೋಕಕ್ಕೆ ಕಾಣಬಾರದೆಂದು ಲೋಕ ಕತ್ತಲೆಯಲ್ಲಿ ಅವಳ ಸಹವಾಸ ಮಾಡಿತು.

" ಲೋಕಾನs ಅನ್ಯಾಯದ್ದ ಕೊಳಚ್ಯಾಗ ಉಳ್ಯಾಡಾಕ ಹತ್ತೇತಿ ರಾಮಣ್ಣ, ಇನ್ನ ನನ್ನ ಗಂಡಗೊಬ್ಬಗs ಅಂದ ಏನ್ಮಾಡ್ಲಿ ಹೇಳಃ !

— ಎಷ್ಟು ನಿಷ್ಠುರವಾಗಿ ಬಂದಿತ್ತು ಆ ಮಾತು !

ಹೊತ್ತು ಮುಳಗಿ ಕತ್ತಲೆ ಆವರಿಸತೊಡಗಿತ್ತು. ಪಾರೋತಿಯ ಒಡಲು ದಹಿಸುತಿತ್ತು. ಬೇಸಗೆಯ ಕಡು ಬಿಸಿಲಿನಂತೆ, ಬೇಸಗೆಯ ಕಡುಬಿಸಿಲಿನಲ್ಲೂ ಜನ ತನ್ನ ಬಯಕೆಯ ತೃಪ್ತಿಗಾಗಿ ಅಲ್ಲಿ ಸುಳಿಯುತಿತ್ತು.

" ಬರ್ತೀನಿ ಪಾರಕ್ಕ "

— ಎಂದು ಹೇಳಿ ಏಳತೊಡಗಿದ ರಾಮಣ್ಣ.

" ಒಂದು ಕಪ್ಪು ಚಾ ಮಾಡ್ತೀನಿ, ತಡಿ "

—ಎಂಬ ಮಾತು ಪಾರೋತಿಯ ತುದಿ ನಾಲಗೆ ದಾಟಿ ತುಟಿಯ ವರೆಗೂ ಬಂದಿತ್ತು. ಆದರೆ ಗಿರಾಕಿ ಕಾದು ನಿಂತಿತ್ತು. ವ್ಯವಹಾರ ಕಾಯಿ ಸುವುದು ನೀತಿಯಲ್ಲ. ತನ್ನ ಹೊಟ್ಟೆ ಹಸಿವಿನಿಂದ ಉರಿಯುತಿದ್ದರೂ ಅತ್ತ ಆವಳ ಲಕ್ಷವಿಲ್ಲ. ಮೊದಲು ವ್ಯವಹಾರ ಆ ಮೇಲೆ ಉಳಿದ ವಿಚಾರ.

ರಾಮಣ್ಣ ಹೊಸಲು ದಾಟಿ ಹೊರಗೆ ಬಂದಾಗ ಎರಡು ಕಣ್ಣು ಅವ ನನ್ನ ನೋಡಿ ಅರ್ಥಗರ್ಭಿತವಾಗಿ ನಕ್ಕವು. ಆ ಅರ್ಥ—

" ಸೂಳೆಗೇರಿಯಲ್ಲಿ ಇಃ ಸಭ್ಯ ಗೃಹಸ್ಥ ಥತ್-ದುನಿಯಾ ಕೆಟ್ಟು ಹೋಯ್ತು " ಎಂದು ಹೇಳುತಿತ್ತು. ಹಾಗೆ ಹೇಳಿದ ಆ ಕಣ್ಣು ರಾಮಣ್ಣ ಹೊರ ಬರುವುದನ್ನೇ ಕಾಯುತಿತ್ತು. ಅವನು ಹೊರ ಬರುವುದೇ ತಡ-ತಾನು ಪ್ರವೇಶಿಸಿತು.

" ಥತ್ "

—ಎಂದು ರಾಮಣ್ಣ ತಿರಸ್ಕಾರದಿಂದ ಉಗುಳಿ ಮುಂದೆ ನಡೆದ.

" ಥತ್ "

—ಎಂದು ಪಾರೋತಿ ಮನಸಿನಲ್ಲಿಯೇ ತಿರಸ್ಕಾರದಿಂದ ಉಗುಳಿ ಅವ ನನ್ನು ಸ್ವಾಗತಿಸಿದಳು.

# ಮೂಡಿ ಬಾ ಬುದ್ಧ

ಶ್ರೀ. ಪ್ರಲ್ಹಾದರಾವ ಕುಲಕರ್ಣಿ, ಗೋಕಾಕ.
ಎಮ್. ಎ., ಬಿ. ಟಿ.

೧

ಭಾರತದ ಪುಣ್ಯಬಲ ಬಲಗೊಂಡು ನಿಂದಿಹುದು
ನಿನ್ನುದಯ ಕಾರಣದಿ ಪಾವನತೆವೆತ್ತು.
ಧರ್ಮಪುರುಷರ ನಾಡು ರಾಜರ್ಷಿಗಳ ಬೀಡು
ಎಂಬ ಕೀರ್ತಿಗೆ ಕಳಸ ತಾನೇರಿತು.
ಲೋಕ ಕಲ್ಯಾಣವದು ರಾಜಧರ್ಮವು ನಿಜವು.
ನಿನ್ನ ಸಾಧನೆ ಸಿದ್ಧಿ ಚಕ್ರಿಗಸದಳವು !
ವಿಶ್ವಹೃದಯದ ಸ್ವರ್ಣಸಿಂಹಾಸನದ ಮೇಲೆ
ಮೆರೆವ ಚಕ್ರಾಧಿಪನೆ, ನಮನ ನಿನಗೆ !

೨

ಅರಮನೆಯ ಹೊರಗೆ ನೀ ಕಂಡುದಾವುದು ನೋಟ ?
ರುದ್ರಭೀಕರ ಸಾವು ನೋವಿನಾಟ !
ಮುಪ್ಪಿನಿಂ ಬೆನ್ ಬಾಗಿ, ಜೋಲ್ದ ದೇಹದ ರೋಗಿ.
ದಾರಿದ್ರ್ಯದುಮ್ಮಳದ ದೃಶ್ಯವಕಟ !
ನಾಲ್ಕು ಜನಗಳ ಹೆಗಲನೇರಿ ಸಾಗಿಹುದೇನು ?
ವೈಚಿತ್ರ್ಯವೆನಿಸಿತ್ತು ಮರಣ ನಿನಗೆ !
ಹುಟ್ಟುಸಾವಿನ ಜಂಜಡದ ಪ್ರಥಮ ಪರಿಚಯವು.
ಹೊಸಹೊಮ್ಮು ಸಮನಿಸಿತು ಬಾಳಗುರಿಗೆ !

೩

ಸತಿ ಯಶೋಧರೆ ಪ್ರಿಯಳು ಪತಿವ್ರತೆಯು ರೂಪಸಿಯು
ಮಗನು ರಾಹುಲ ಮಮತೆಯುಕ್ಕಿಸುವನು.
ಇಂಥ ಸುಂದರ ಸಾರ ಸಂಸಾರ ತೊರೆಯಲ್ಕೆ
ಹೇ ಬುದ್ಧ, ಹೇಗಾದೆ ಸನ್ನದ್ಧ ನೀನು ?

ಲೋಕದಳಲನು ಕಳೆಯಲೆಂದು ತೆರಳಿದೆ ವನಕೆ :
ನಾಕ ತನಗಹುದೆಂಬ ಸ್ವಾರ್ಥವಲ್ಲ !
ಜನನ ಜರೆ ಮರಣಗಳ ಮೀರಿ ಹರಿಯುವ ತತ್ವ-
ಪಥವ ತೋರಲು ಜನಕೆ ನಡೆದೆ ವನಕೆ.

೪

ಮನೆ ಮಡದಿ ಮಕ್ಕಳನು ಮರೆದು ಕಾಡಿಗೆ ನಡೆದು
ತಪವೆಸಗಿದವರೆನಿತೊ ಮಹಿಮರೊಳರು !
ಇನ್ನೇಸೊ ಋಷಿವರರು ಇಹಜೀವನಕೆ ಹೇಸಿ
ಪರವ ದೊರಕಿಸಲೆಳಸಿ ಅಡವಿ ಸೇರಿದರು !
ಧ್ಯೇಯ ನಿನ್ನದು ಭಿನ್ನ ಸೌಹಾರ್ದಸಂಪನ್ನ
ಹೇ ಬುದ್ಧ, ನೀ ದಿಟದ ದಾರ್ಶನಿಕನು.
ಎಂಟು ಹಂತದ ಸತ್ಯಧರ್ಮನಿಯಮದ ಪಥದಿ
ಜಗದ ಸೊಗ ಸಾಧಿಸಲು ಜೀವ ಸವೆದವನು–

೫

ಘನ ಅಶೋಕನ ಮನಸು ಶಾಂತಿಯನು ಸಂಧಿಸಿತು
ಬೌದ್ಧ ಧರ್ಮದ ತತ್ವಪ್ರಭೆಗೆ ಸೋತು.
ಪ್ರೀತಿದಯೆ ಮಾಯೆಗಳು ಮೂಡಿದುವು ಸಮರದೊಳು.
ನೀತಿ ನಿನ್ನದು ಪಡೆದ ಖ್ಯಾತಿಯಿಂತು !
ಎರಡು ಸಾವಿರ ನಾಲ್ಕು ನೂರಬುದಗಳ ಕಾಲ
ಗತಿಸಿದರೂ ಮಸುಳಿಸದ ಮತವು ಶುದ್ಧ.
ಅಜ್ಞಾನ ಕೋಟಲೆಗೆ ನೊಂದ ಜನಕೋಟಿಯನು
ಜ್ಞಾನದೆಡೆಗೊಯ್ವ ಸತ್ಪಥವು, ಬುದ್ಧ.

೬

ಶಾಂತಿ ಕದಡಿದ ಜಗವು ಕಾತರದ ನೋಟದಲಿ
ನಿರುಕಿಸುತಲಿಹುದು ನಿನ್ನಾಗಮನವ !
ಮೂಡಿ ಬಾ ಬುದ್ಧ, ಪುನರವತರಿಸು ಲೋಕದಲಿ
ತವಿಸು ಮುತ್ತಿದ ಕಾಳ ಕತ್ತಲೆಯನು !

# ಆದರ್ಶ ಮಾತೆ

ಅನುವಾದಕರು : **ಕುಮಾರಿ ಕೆ, ಲೀಲಾ.**
ಲಿಂಗರಾಜ ಕಾಲೇಜ, ಬೆಳಗಾವಿ.

ಪುರುಷ ಮತ್ತು ಸ್ತ್ರೀ ಇವರು ಮಾನವ ಸಮಾಜದ ಎರಡು ಅಂಗಗಳು. ಸೃಷ್ಟಿಯು ತನ್ನ ಕರ್ತವ್ಯದ ಯೋಜನೆಯನ್ನು ಕಾರ್ಯರೂಪದಲ್ಲಿ ತರಲು ಈ ವಿಭಜನೆಯನ್ನು ಮಾಡಿರುತ್ತದೆ. ಈ ಎರಡರ ಸಮ್ಮಿಲನದಿಂದಲೇ ಸೃಷ್ಟಿಯು ಸಾಗಿರುತ್ತದೆ, ಮತ್ತು ಸಮಾಜ ಜೀವನವು ಮುನ್ನಡೆಯುತ್ತಿದೆ. ಸ್ತ್ರೀಯು ಮಾತೆಯು ಅವಳು ಹೊಸಜೀವಿಗೆ ಜನ್ಮಕೊಡುವದಲ್ಲದೆ ಪಾಲನೆ ಪೋಷಣೆಯನ್ನೂ ಮಾಡುತ್ತಾಳೆ. ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀ ದೇವತೆಯೆಂದು ಮನ್ನಿಸಿ ಈ ಸರ್ವೋತ್ಕೃಷ್ಟ ಸ್ಥಾನವು ಆಕೆಗೆ ಕೊಡಲ್ಪಟ್ಟಿರುತ್ತದೆ. ಸ್ತ್ರೀಯು ಮಾತೆಯಿರುವಳೆಂಬ ಮಾತ್ರಕ್ಕೆ ಹೊಸಜೀವಿಗೆ ಜನ್ಮಕೊಟ್ಟು ಅವಳು ತನ್ನ ಕರ್ತವ್ಯದಿಂದ ಮುಕ್ತಹೊಂದಿದಳೆಂದು ತಿಳಿಯುವದು ಯೋಗ್ಯವಲ್ಲ. ಎಲ್ಲಿಯವರೆಗೆ ಮಾತೆಯು ತನ್ನ ಸಂತಾನವನ್ನು ರಾಷ್ಟ್ರದ ಸುನಾಗರಿಕರನ್ನಾಗಿ ಮಾಡಿ ನಿಲ್ಲಿಸುವದಿಲ್ಲವೋ ಅಲ್ಲಿಯವರೆಗೆ ಆಕೆಯ ಕಾರ್ಯ ಮತ್ತು ಕರ್ತವ್ಯವು ಸಮಾಪ್ತವಾಗಲಾರವು. ಇಂತಹ ನಾಗರಿಕರನ್ನು ಉಂಟುಮಾಡದ ಸ್ತ್ರೀಯರು ಆದರ್ಶ ಮಾತೆಯರೆಂದು ಹೇಳಿಕೊಳ್ಳಲು ಯೋಗ್ಯರಲ್ಲ. ಶಿಶುಗಳನ್ನು ಆದರ್ಶ ನಾಗರಿಕರನ್ನಾಗಿ ಮಾಡಲು ಅವಶ್ಯವಿರುವ ಜ್ಞಾನ, ಅನುಭವ ಮತ್ತು ಶಿಕ್ಷಣವು ಇಂದಿನ ಸ್ತ್ರೀಯರಲ್ಲಿ ಕಂಡು ಬರುವದಿಲ್ಲ. ವಸ್ತುತ : ಸ್ತ್ರೀಯು ನಿಜವಾದ ಆದರ್ಶ ಮಾತೆಯಾಗಲು ಸರ್ವೋತ್ಕೃಷ್ಟ ಶಿಕ್ಷಣದ ಅವಶ್ಯಕತೆ ಇದೆ. ಪುರುಷರಿಗೆ ಕೊಡಲ್ಪಡುವ ಶಿಕ್ಷಣಕ್ಕಿಂತ ಶ್ರೇಷ್ಠ, ಉಚ್ಚತಮ ಶಿಕ್ಷಣದ ಅವಶ್ಯಕತೆಯು ಅವಳಿಗಿರುತ್ತದೆ. ಲೋಕತಂತ್ರದಲ್ಲಿ ಅವಳು ಮತದಾನದ ಸಮಾನ ಅಧಿಕಾರವನ್ನು ಪಡೆದಿರುವಳು. ಈ ಅಧಿಕಾರದ ಉಚಿತ ಉಪಯೋಗವನ್ನು ಮಾಡಿಕೊಂಡು ಅವಳು ರಾಜನೀತಿಕ್ಷೇತ್ರದಲ್ಲಿ ಧುಮುಕಿ ಮುನ್ನಡೆಯಲಿ.

( ಮೂಲ ಲೇಖಕರು : **ಶ್ರೀಮತಿ ಹಿರಾಬಾಯಿ ಐಯ್ಯರ** )

# ನವಜೀವನ

ಶ್ರೀ ಬಾಳು. ಬಿ. ಉಪಾಧ್ಯೆ, ಶಮನೇವಾಡಿ.

೧

ವರುವರುಷಕೆ ತೆರೆಯುತಿದೆ
ಹೊಸವರುಷದ ಬಾಗಿಲ !
ಹರುಷ ಹೆಚ್ಚಿ ಕೂಗುತಿದೆ
ಮಾಮರದಲಿ ಕೋಗಿಲ !

೨

ಮನಮನಗಳ ಸಂತ್ರಸವ
ಸೃಷ್ಟಿಯು ನವಚೇತನ
ಬಾನ್ ಬಯಲಲಿ ಸಂಚರಿಸುವ
ತಾರಾ ಸಹಜೀವನ

೩

ದೈನಂದಿನ ದನ ಕರು ಜನ-
ಪಕ್ಷಿಯು ಉಪಜೀವನ
ಕಣಕಣದಲು ತರುಲತೆ ಮರ
ಸೃಷ್ಟಿಯೆ ಚಿರನೂತನ

೪

ಮಳೆಬಿಲ್ಲಿನ ಹೊಳೆ ಬಾನ್-
ಶೋಭಾಮಯ ತೋರಣ
ಸುಳಿಗಾಳಿಗೆ ಸಂಚರಿಸುವ
ಸೌರಭ ಶುಭ ಸೂಚನ

೫

ಜನ-ಗಣ-ಮನ, ಜೀವನಧನ
ಬಾಂದೇವಿಯ ಪೂಜನ
ಮರಸವೆ ಸಹಜೀವನ
ಸೌಖ್ಯದ ಸುಖಸಾಧನ.

# ನಮ್ಮ ಹೊಣೆ

ಲೇಖಕರು: ಶ್ರೀ. ಬಾಳೇಶ ಲಕ್ಷೆಟ್ಟಿ, ಗೋಕಾಕ.

ನಾವೀಗ ನಮ್ಮದೇ ಆದ ರಾಜ್ಯವನ್ನು ಪಡೆದಿದ್ದೇವೆ. ಎರಡು ಕೋಟಿ ಜನಗಳು ಹೊಸಮನ್ವಂತರದಲ್ಲಿ ಕಾಲಿಟ್ಟಿದ್ದೇವೆ. ಕಾವೇರಿ, ಗೋದಾವರಿ, ಘಟಪ್ರಭೆ, ಮಲಪ್ರಭೆ, ಮೊದಲಾದ ಪುಣ್ಯನದಿಗಳಲ್ಲಿ ತನ್ನ ಪಾದಪದ್ಮಗಳನ್ನು ತೊಳೆಸಿಕೊಳ್ಳುತ್ತಿರುವ ಮಹಾತಪಸ್ವಿನಿ- ಕನ್ನಡಾಂಬೆಯ ವೈಭವಶಾಲಿ ಸುಂದರ ದೃಶ್ಯವು ನಮ್ಮೆಲ್ಲರ ಮುಂದಿದೆ. ಕಾವ್ಯಕಲೆ ಸಂಸ್ಕೃತಿಗಳ ಬೀಡಾದ ನಮ್ಮನಾಡು ತನ್ನ ಹಿರಿಮೆಯನ್ನು ಜಗತ್ತಿಗೆ ತೋರುತ್ತಿರುವದೋ ಏನೋ ಎಂಬಂತೆ ಎದ್ದು ನಿಂತಿದೆ. ಈ ಸಮಯದಲ್ಲಿ ನಾವೆಲ್ಲ, ಎರಡುಕೋಟಿ ಜನಗಳು, ಒಂದೇ ತಾಯಿಯ ಮಕ್ಕಳೆಂದು ಬಗೆದು ಸುಸಂಘಟಿತರಾಗಿ ಬಾಳಬೇಕಾಗಿದೆ. ಇತರರಿಗೂ ಬಾಳಗೊಡಬೇಕಾಗಿದೆ. ನಮ್ಮ ನಾಡು ಭರತಖಂಡದ ಒಂದು ಅಂಗವೆಂಬುದನ್ನು ನಾವು ಎಂದಿಗೂ ಮರೆಯಬಾರದು. ' ಮೊದಲು ಭಾರತ ನಂತರ ಕರ್ನಾಟಕ ' ಎಂಬ ಭಾವನೆ ಪ್ರತಿಯೊಬ್ಬ ಕನ್ನಡಿಗನಲ್ಲಿ ಮೂಡಿಬರಬೇಕು. ಎಲ್ಲ ಬಗೆಯ ಭಿನ್ನ ಭಿನ್ನ ಭಾವನೆಗಳನ್ನು ಕಿತ್ತುಹಾಕಿ ಬೆಂಗಳೂರಿನಿಂದ ಬೆಳಗಾವಿಯವರೆಗಿನ ಜನಗಳಲ್ಲಿ ' ನಾವೆಲ್ಲ ಒಂದು ' ಎಂಬ ಭಾವನೆ ನೆಲೆಸಬೇಕು. ನಮ್ಮ ಎಲ್ಲ ಜಂಜಡಗಳನ್ನು ಮರೆತು, ಪರರ ಮಾತುಗಳಿಂದ ಇಲ್ಲವೆ ನಮ್ಮ ಗ್ರಹಕೃತ್ಯಗಳಿಂದ ಉಂಟಾಗಬಹುದಾದ ಕ್ಷೋಭೆಯ ಕಲ್ಮಶಕ್ಕೆ ಹೃದಯಮಂದಿರದಲ್ಲಿ ಇಂಬುಕೊಡದೆ, ಹಳೆಯ ಭೇದಭಾವಗಳನ್ನು ಬೇರುಸಹಿತ ನಾಶಗೊಳಿಸಿ, ಆದರ್ಶ ರಾಜ್ಯವನ್ನಾಗಿ ಮಾಡಲು ನಮ್ಮ ಜನಗಳು ಜೀವನವನ್ನೇ ಪಣವಾಗಿಟ್ಟು ಮುನ್ನಡೆಯಬೇಕು. ಕರ್ನಾಟಕ ರಾಜ್ಯವನ್ನು ಬಲಪಡಿಸಲು ಸಕಲ ಪಕ್ಷ- ಪಂಗಡಗಳ ಜನಗಳು ಒಂದಾಗಿ ನಡೆಯಬೇಕು. ಧುರೀಣರೆನ್ನಿಸಿಕೊಳ್ಳುವವರು ಹೊಣೆಗಾರರಂತೆ ವರ್ತಿಸಬೇಕು.

ರವಿ ಕಾಣದ್ದನ್ನು ಕವಿ ಕಾಣುವನು ' ಎಂಬ ಮಾತು ನಿಜವಿದೆ. ನೂರು ಜನ ರಾಜಕಾರಣಿಗಳು ಮಾಡುವ ಕಾರ್ಯವನ್ನು ಒಬ್ಬನೇ ಒಬ್ಬ ಕವಿಯು ತನ್ನ ಪ್ರತಿಭಾಶಕ್ತಿಯಿಂದ ಮಾಡಬಲ್ಲನು. ಜನಮನಗಳಲ್ಲಿ ರಾಷ್ಟ್ರೀಯ

ಜಾಗೃತಿಯನ್ನು ನಿರ್ಮಾಣಮಾಡುವದು ಕವಿಗಳಿಂದಲೇ ಸಾಧ್ಯ. ಜನಗಳಲ್ಲಿ ಸ್ಫೂರ್ತಿ ಗಂಗೆಯು ಹರಿಯುವದು, ಕವಿಗಳ ಕವನಗಳಿಂದಲೇ ಹೊರತು ರಾಜಕಾರಣಿಗಳ ಭಾಷಣಗಳಿಂದಲ್ಲ. ಡಾ. ಕರ್ಕಿಯವರು ಬರೆದ 'ಹಚ್ಚೇವು ಕನ್ನಡದ ದೀಪ' ಹುಯಿಲಗೋಳರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಹಾಗೂ ಬೇಂದ್ರೆಯವರ 'ಒಂದೇ ಒಂದೇ ಕರ್ನಾಟಕ ಒಂದೇ;' ಎಂಬ ಹಾಡುಗಳು ಜನಗಳನ್ನು ಬಡಿದೆಬ್ಬಿಸಿ ಅವರಲ್ಲಿ ದೇಶಪ್ರೇಮ ವನ್ನುಂಟು ಮಾಡಿವೆಯೆಂದು ಹೇಳಬಹುದು. ಈ ಹಾಡುಗಳು ಇಂದು ಎರಡು ಕೋಟಿ ಜನಗಳ ಬಾಯಲ್ಲಿ ಅವೆ. ಇವುಗಳಿಂದ ಜನತೆ ಸ್ಫೂರ್ತಿ ಪಡೆಯು ತ್ತಿದೆ. ಸ್ಫೂರ್ತಿ ಪಡೆದು ಬಲಶಾಲಿಯಾಗುತ್ತಿದೆ. 'ನಾಡು ಬಾಳಿ ನಾಡು ಉಳಿಯಲು ಬಲಬೇಕು;' ಬಲವನ್ನು ಜನಗಳಲ್ಲಿ ತುಂಬುವಂಥ ಕವಿಗಳಿಗೆ ನಮ್ಮ ನವನಾಡಿನಲ್ಲಿ ವಿಶಿಷ್ಟ ಸ್ಥಾನ ಸಿಗಬೇಕು.

ನವೀನವಾಗಿ ರಚಿತವಾದ ಕರ್ನಾಟಕ ರಾಜ್ಯವು ಭರತಖಂಡದ ಐಕ್ಯಕ್ಕೆ ಇನ್ನಷ್ಟು ಧೃಡತೆಯನ್ನು, ಪುಷ್ಟಿಯನ್ನು ಕೊಡಬೇಕು. ಕರ್ನಾಟಕವು ಕೇವಲ ಕನ್ನಡಿಗರ ಬೀಡಾಗದೆ, ಅದು ಸರ್ವ ಭಾಷೆಗಳ, ಸರ್ವಪಂಗಡಗಳ ಜನಗಳ ಪುಣ್ಯಕ್ಷೇತ್ರವಾಗಬೇಕು. ಈ ಶುಭಕಾಲದಲ್ಲಿ ಸತ್ಪ್ರವೃತ್ತಿ, ಸದ್ಭಾವನೆಗಳು ನಿರ್ಮಾಣವಾಗಿ ನವನಿರ್ಮಿತ ಕರ್ನಾಟಕ ರಾಜ್ಯವು ಸಮಗ್ರ ಭರತಖಂಡ ದಲ್ಲಿಯೇ ಸರ್ವರೀತಿಯಿಂದಲೂ ಆದರ್ಶ ರಾಜ್ಯವಾಗಿ ಮೆರೆಯಬೇಕು. ಕರ್ನಾಟಕ ರಾಜ್ಯದ ಮೇಲಿರುವ ಆದರ್ಶತ್ವದ ಹೊಣೆಯನ್ನು ಕನ್ನಡಿಗರು ಇಂದು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಬೇಕಾಗಿದೆ.

# ಲತೆ ಲಲಿತೆ

—ಶ್ರೀ. ಶ್ರೀಕಾಂತ ಶಮನೇವಾಡಿ.

೧

ಬಳುಕು ಬಳುಕೆಲೆ ಬಳ್ಳಿ ಮನದ ಮೌನವ ತಳ್ಳಿ
ಮುದದಿಂದ ಮೊಗವೆತ್ತಿ ಬಳುಕಾಡು ನೀ
ನಿನ್ನೆದೆಯ ದುಗುಡವನು ಈ ಬಗೆಯ ಅಳಲವನು—
ಕಳೆದೊಗೆದು, ಹೂ ತಳೆದು ತುಳುಕಾಡು ನೀ

೨

ಸೂಸಿ ಬಹ ತಂಗಾಳಿಯಲಿ ನಿತ್ಯ ಭೃಂಗಾಳಿ
ಪ್ರೀತಿ ಗೀತವನೆ ಹೊರಸೂಸುತಿಹವು
ರಸ-ಗಂಧ-ರುಚಿಹೀನ ನಿನ್ನದೀ ತೆರಮೌನ-
ಮರಳಿನಾ ಮೃಗಜಲದೊಳೀಸುತಿಹವು

೩

ಸಾಕು ಚಿಂತಾಕುಲತೆ ನಿನ್ನದೀ ವ್ಯಾಕುಲತೆ—
ಗೇನಿಹುದು ಹೇಳಾರೆ ಹೇಳು ಕೊರತೆ ?
ನಿನ್ನ ಕಮನೀಯತೆಯ ವಿಮಲ ರಮಣೀಯತೆಯ
ಚೆಲುವಿನಲಿ ಚಿಮ್ಮಿಸಾ ರಸದ ಒರತೆ

೪

ಯಾವ ದೇವನಿಗಿಂತು ತಪಸ್ಗೈವೆ ನೀನಿಂತು
ಇನ್ನೇಸು ದಿನಗಳಲಿ ಈ ಯೋಗಸಿದ್ಧಿ
ಅಗೊ ಬಂದನದೊ ಚೈತ್ರ, ಮಧುಮಾಸದಲಿ ಚೈತ್ರ
ಯಾತ್ರೆಯಲಿ ನೀನೇಕೆ ಮೌನತೆಯ ಹೊದ್ದಿ ?

# ಅಮರ ಶಿಲ್ಪಿ !!

ಲೇಖಕರು : ಶ್ರೀ. ವಸಂತ ಬೆಟಗೇರಿ, ಬೆಳಗಾವಿ.

ಇಂದಿಗೆ ಸುಮಾರು ೩೦೦ ವರುಷಗಳ ಹಿಂದಿನ ಸಂಗತಿ ಇದು. ಆಗ ಉತ್ತರ ಭಾರತದಲ್ಲಿ ಮೊಗಲರಾಳುತ್ತಿದ್ದರು. ಮೊಗಲ ಸಮ್ರಾಟರಲ್ಲಿ ಅಧಿಕ ಸಂಪತ್ತಿಶಾಲೀ, ವೈಭವಶಾಲೀ ಸಮ್ರಾಟನೆಂದರೆ ಶಹಾಜಹಾನ. ಅವನ ಕಾಲದಲ್ಲಿ ದೇಶದ ಎಲ್ಲ ಕಡೆಗೂ ಶಾಂತಿ, ಸುವ್ಯವಸ್ಥೆ, ಸುಖ ಸಂತೋಷವು ನೆಲೆಸಿತ್ತು. ಪ್ರಜೆಗಳು ಸುಖಿಗಳಾಗಿದ್ದರು. ಬಾದಶಹನ ಭಾಂಡಾರ ಮುತ್ತು, ರತ್ನ, ವಜ್ರ- ವೈಡೂರ್ಯಾದಿಗಳಿಂದ ತುಂಬಿತುಳುಕುತ್ತಿತ್ತು. ಇಷ್ಟೊಂದು ಸಂಪತ್ತಿಶಾಲಿಯಾದರೂ ಬಾದಶಹನು ಕೋಮಲಹೃದಯನೂ ಕಲಾಪ್ರೇಮಿಯೂ ಆಗಿದ್ದನು.

ಬಾದಶಹನಿಗೆ ತಕ್ಕಂತೆ ಅವನ ಪ್ರೇಮದ ಪುಥ್ಥಳಿಯಾಗಿ, ಅವನ ಬಲಗೈಯಾಗಿ ಮೆರೆದವಳೆಂದರೆ ಮುಮತಾಜಳು. ಬಾದಶಹನಿಗೆ ಮುಮತಾಜಳೆಂದರೆ ಜೀವ ಪ್ರಾಣ ಮುಮತಾಜಳಿಗೆ ಬಾದಶಹನೆಂದರೆ ಪಂಚ ಪ್ರಾಣ.

ಹೀಗಿರಲು ಮುಮತಾಜಳೊಮ್ಮೆ ಬೇನೆಬಿದ್ದಳು. ಬೇನೆ ಬೆಳೆದ ಮುಮತಾಜಳಿನ್ನು ಬದುಕುವದು ಅಸಾಧ್ಯವೆಂದು ಬಾದಶಹನಿಗೆ ಖಚಿತವಾಯಿತು ಅವಳಿಗಾಗಿ ಸಾಮ್ರಾಜ್ಯವನ್ನೆ ಮುಡಿಪಾಗಿಡಲು ಸಿದ್ಧನಿದ್ದ. ಬಾದಶಹನಿಗೆ ಅವಳ ಅಂತ್ಯಕಾಲ ಸಮೀಪಿಸುತ್ತಿರುವದನ್ನು ಕಂಡು ಮರ ಮರ ಮರುಗಿದನು.

ಆಗ ಮುಮತಾಜಳನ್ನು ಕುರಿತು ಬಾದಶಹನು – " ನನ್ನ ಮಮತೆಯ ಮುಮತಾಜ, ನನ್ನ ಹತ್ತರ ಇಷ್ಟೊಂದು ಧನ – ದೌಲತ್ ಇದ್ದಾಗ್ಯೂ ನಿನಗಾಗಿ ನಾನು ಒಂದು ಕಾಸನ್ನೂ ವ್ಯಯಿಸಿಲ್ಲ, ನಿನ್ನ ಸುಖಕ್ಕಾಗಿ ನಾನು ವಿಶೇಷವೇನನ್ನೂ ಮಾಡಿಲ್ಲ. ಈ ಕೊನೆಗಳಿಗೆಯಲ್ಲಾದರೂ ನಿನಗೆ ಬೇಕಾದದ್ದನ್ನು ಬೇಡಿಕೋ. ಅಷ್ಟಾದರೂ ನನ್ನಿಂದ ನಿನ್ನ ಸೇವೆಯಾಗಲಿ. ಅದೇ ನನಗೆ ಸಂತೋಷ" ಎಂದು ಹೃದಯಬಿಚ್ಚಿ ಹೇಳಿದನ.. ಪತಿಯ ಸಂತೋಷವೇ ತನ್ನ ಸಂತೋಷ ಎಂದು ತಿಳಿದ ಮುಮತಾಜಳು- " ಈ ಶರೀರ ನಶ್ವರ. ಇಂದಿಲ್ಲ

ನಾಳೆ ಮರಳಿ ಮಣ್ಣಿಗೆ ಹೋಗಬೇಕಾದುದು. ಆದರೆ ನನ್ನ ನಿಮ್ಮ ಪ್ರೇಮ ಅಮರ-ಸ್ಥಿರ ನಮ್ಮ ಅಮರ ಪ್ರೇಮದ ಸಂಕೇತವಾಗಿ ಇಂಥ ಒಂದು ಶಿಲ್ಪ ಕಲಾಕೃತಿಯನ್ನು ರಚಿಸಬೇಕು. ಅಂಥ ಕಟ್ಟಡ ಕೃತಿ ಜಗತ್ತಿನ ಇನ್ನಾವಲ್ಲಿಯೂ ಸಾಧ್ಯವಾಗಿರಕೂಡದು. ಈ ವಿಶ್ವವಿರುವವರೆಗೆ ನಮ್ಮ ಪ್ರೇಮದ ಧ್ಯೋತಕವಾಗಿ ಅದು ಮೆರೆಯಬೇಕು. ಇದೇ ನನ್ನ ಕೊನೆ ಯಾಶೆ " ಎಂದು ಹೇಳಿ, ಕೊನೆಯುಸಿರನ್ನೆಳೆದಳು.

ಬಾದಶಹನು ಅವಳ ವಿಯೋಗದಿಂದ ಬಹಳ ಮರುಗಿದನು. ಅವಳ ಕೊನೆಯಾಶೆಯನ್ನು ನೆರವೇರಿಸಲು ಕಂಕಣಬದ್ಧನಾದನು. ಜಗತ್ತಿನ ನಾನಾ ಭಾಗಗಳಿಂದ ಶಿಲ್ಪಿಗಳನ್ನು ಬರಮಾಡಿಕೊಂಡನು. ಅವರಿಗೆ ತನ್ನ ನಿಯೋಜಿತ ಕಾರ್ಯವನ್ನು ಒಪ್ಪಿಸಿದನು. ಅದರ ಫಲವಾಗಿ ಆಗ್ರಾದ ಹತ್ತಿರ ಯಮುನಾ ನದೀ ತೀರದಲ್ಲಿ ಜಗತ್ತಿನಲ್ಲೇ ಅತ್ಯದ್ಭುತ ಆಶ್ಚರ್ಯಕರ ಸಂಗತಿಗಳಲ್ಲೊಂದಾದ " **ತಾಜ ಮಹಲ್** " ನಿರ್ಮಾಣವಾಯಿತು.

ಒಂದು ದಿನ ಸಾಯಂಕಾಲದ ಗಾಳಿಸೇವನೆಗಾಗಿ ಹೋಗಿದ್ದ ಬಾದಶಹನು ಪೂರ್ಣವಾದ ತಾಜಮಹಲನ್ನು ಕಂಡು ಮುಗ್ಧನಾದನು ಸಂತೋಷಾತಿರೇಕದಿಂದ ಕುಣಿದಾಡಿದನು. ಇದಕ್ಕೂ ಸುಂದರವಾದ ಕಟ್ಟಡ ಇನ್ನೆಲ್ಲಿಯೂ ಇರಲಾರದು. ಆಹಾ ತಾಜ! ಎಂದು ಸಂತೋಷಬಟ್ಟನು. ಅದರ ಜೊತೆಗೆ ಬಾದಶಹನ ಮನಸ್ಸಿನಲ್ಲಿ ದುರಭಿಮಾನದ ಸಂಶಯವೂ ಉತ್ಪನ್ನ ವಾಯಿತು. ತಾಜ ನಿರ್ಮಿಸಿದ ಶಿಲ್ಪಿ ಮತ್ತಾವದೇ ಬಾದಶಹನಿಗಾಗಿ ಇದಕ್ಕೂ ಸೌಂದರ್ಯಶಾಲಿಯಾದ ಕಟ್ಟಡವನ್ನು ಕಟ್ಟಲಿಕ್ಕಿಲ್ಲವಷ್ಟೆ ? ಕಟ್ಟಿದರೆ....? ಎಂಬ ಶಂಕೆಗೆ ಒಳಗಾಗಿ ಆ ಮಹಾನ್ ಶಿಲ್ಪಿಯ ಕೈಗಳೆ ರಡನ್ನೂ ಕತ್ತರಿಸಿ ಹಾಕಬೇಕೆಂದು ರಾಜಾಜ್ಞೆಯನ್ನು ಹೊರಡಿಸಿದನು.

ರಾಜಾಜ್ಞೆಯ ಮೇರೆಗೆ ಆ ಕಲಾವಂತ ಶಿಲ್ಪಿಯನ್ನು ಬಾದಶಹನ ಸಮ್ಮುಖದಲ್ಲಿ ಹಾಜರ ಪಡಿಸಲಾಯಿತು ಹಾಗೂ ರಾಜಾಜ್ಞೆತಿಳಿಸ ಲಾಯಿತು. ಬಾದಶಹನ ಇಂಗಿತವನ್ನರಿತ ಆ ಶಿಲ್ಪಿಯು ಎಳ್ಳಷ್ಟೂ ಅಂಜದೆ

"ಜಹಾಪನಾಹ ನನ್ನ ಕೈಗಳನ್ನು ತಾವು ಆನಂದದಿಂದ ಕತ್ತರಿಸಿ ಹಾಕ ಬಹುದು. ಆದರೆ 'ತಾಜ' ನಲ್ಲಿ ಇನ್ನೊಂದು ದಿನದ ಕೆಲಸ ಮಾಡುವದು ಮಾತ್ರ ಉಳಿದಿದೆ. ಅದನ್ನಷ್ಟು ಪೂರ್ಣಮಾಡಲು ಅವಕಾಶ ಕಲ್ಪಿಸಿ ಕೊಟ್ಟರೆ ನಾನು ಧನ್ಯನು. ಕಟ್ಟಡದ ಕೆಲಸವೂ ಪೂರ್ಣವಾದಂತೆ ಕಾರಣ ಅದನ್ನಷ್ಟು ಮಾಡಲು ಒಂದು ದಿನದ ಅವಕಾಶಕೊಡಿ'' ಎಂದು ನಮ್ರವಾಗಿ ಬೇಡಿಕೊಂಡನು.

ಬಾದಶಹನು ಶಿಲ್ಪಿಯ ಬಿನ್ನಹವನ್ನು ಮಾನ್ಯಮಾಡಿದನು. ಶಿಲ್ಪಿಯು ತನ್ನಲ್ಲಿದ್ದ ಉಚ್ಚಮಟ್ಟದ ಕಲಾಪ್ರೌಢಿಮೆಯನ್ನು ಪ್ರಕಟಗೊಳಿಸಲೆಂದೊ ಏನೋ, ವರ್ಷಾಕಾಲದಲ್ಲಿ ಮುಮತಾಜಳ ಸಮಾಧಿಯಮೇಲೆ ನೀರ ಹರಿಯುವಂತೆ ಮಾಡಿ, ಸಂತೋಷದಿಂದ ಬಾದಶಹನ ಮುಂದೆ ಹಾಜರಾದನು.

ಆಜ್ಞೆಯ ಮೇರೆಗೆ ಶಿಲ್ಪಶಾಸ್ತ್ರಜ್ಞನ ಕೈಗಳನ್ನು ಕತ್ತರಿಸಲಾಯಿತು. ಇದ ರಿಂದ ಅವನ ಪ್ರತಿಭೆ ಸಾಮ್ರಾಜ್ಯದ ತುಂಬೆಲ್ಲ ಹರಡಿ, ಎಲ್ಲ ಕಡೆಗೂ ಅವ ನನ್ನು ಶ್ಲಾಘಿಸುವ ಮಾತುಗಳೇ ಕೇಳಬರಹತ್ತಿದವು.

ಇದಾದ ಮೇಲೆ ಮಳೆಗಾಲದ ಒಂದು ದಿನ ಬಾದಶಹನು ಮುಮತಾಜಳ ಸಮಾಧಿಯ ದರ್ಶನಕ್ಕಾಗಿ ಹೋದನು. ಆಗ ಸಮಾಧಿಯ ಮೇಲೆ ನೀರೂ ಧಾರೆಯಾಗಿ ಹರಿಯುತ್ತಿರುವದನ್ನು ಕಂಡು ಆಶ್ಚರ್ಯಪಟ್ಟನು. ಜೊತೆಗೆ ಕೋಮಲಹೃದಯಕ್ಕೆ ಅಷ್ಟೇ ದುಃಖವೂ ಆಯಿತು. ಬಾದಶಹನು ಆ ನೀರ ಧಾರೆಯನ್ನು ನಿಲ್ಲಿಸಲು ಶತಪ್ರಯತ್ನ ಪಟ್ಟರೂ ಅವೆಲ್ಲ ನಿಷ್ಫಲವಾದವು.

ಕಡೆಗೆ ಅದನ್ನು ನಿರ್ಮಿಸಿದ ಶಿಲ್ಪಿಯನ್ನೇ ಕರೆಸಿದ. ಅವನು ಅದನ್ನು ಸಾದ್ಯಂತವಾಗಿ ಪರೀಕ್ಷಿಸಿ, ವಿವರಿಸಿ ಹೇಳಿ—, ಆ ನೀರ ಧಾರೆಯನ್ನು ತನ್ನೊಬ್ಬನಿಂದಲೇ ನಿಲ್ಲಿಸುವದು ಸಾಧ್ಯ ಎಂಬುದನ್ನೂ ಬಾದಶಹನಿಗೆ ತಿಳಿಸಿದ. ಆ....ದ....ರೆ ನನಗೆ ಕೈ....ಗ....ಳಿ....ಲ್ಲ!!! ಎಂದು ದೀನಹೃದಯು ದವನಾಗಿ ಅದಕ್ಕೆ ತಪ್ಪಿತಸ್ಥನಾದ ಬಾದಶಹನಲ್ಲಿ ಅರಿಕೆ ಮಾಡಿಕೊಂಡನು.

ಬಾದಶಹನು ತಾನು ಮಾಡಿದ ಪಾಪಕೃತ್ಯಕ್ಕಾಗಿ ವ್ಯಥೆ ಪಟ್ಟನು. ಆದರೆ ಹೋದ ಕೈಗಳು ಮರಳಿಬರುವವೆ ?

ಅಂದಿನಿಂದ ಇಂದಿನವರೆಗೂ ಮಳೆಗಾಲದಲ್ಲಿ ಮುಮತಾಜಳ ಸಮಾಧಿಯ ಮೇಲೆ ನೀರಿನ ಧಾರೆ, ಧಾರಾಕಾರವಾಗಿ ಹರಿಯುತ್ತಲೇ ಇದೆ. ಬಾದಶಹನು ಓರ್ವ ಮಹಾನ್ ಶಿಲ್ಪಜ್ಞನಿಗೆ ಎಸಗಿದ ಪಾಪಕ್ಕೆ ಪ್ರಾಯಶ್ಚಿತವೋ ಎಂಬಂತೆ ಮುಮತಾಜಳ ಕಣ್ಣೀರು ಸುರಿಯುತ್ತಿದೆ. ಅವಳ ಸಮಾಧಿಯ ಮೇಲೆ ನೀರಿನ ಅಭಿಷೇಕವಾಗುತ್ತಾ ಇದೆ.

ಆಹಾ ಶಿಲ್ಪಿ !ಏನೀ ನಿನ್ನ ಅಮರ ಕಲಾಕೃತಿ ?........!!

## ಪುಣ್ಯಸ್ಮೃತಿ

( ಅಗಲಿದ ಸೋದರಿಯನ್ನು ಕುರಿತು. )

ಧರಣಿಯು ಚಲುವಿನ ಮಡಿಲಲಿ ಬೆಳೆದು
ಪರಮ ಪುಣ್ಯದಾ ಕಣಿಯಾದೆ;
ಯಾರಿಗು ದೊರಕದ ಸುಖವನು ಪಡೆದು
ಹರನ ಪೂಜೆಗೆ ಹೂವಾದೆ.

ಚನ್ನ ಬಸಪ್ಪನ ಕರವನು ಹಿಡಿದು
ಮಂಗಲ ಭಾಗ್ಯವ ನೀನೈದೆ;
ಬಾಳಿನ ಬವಣೆಯ ನಂಜನು ಕುಡಿದು
'ಗಂಗಾದೇವಿ'ಯೆ ನೀ ನಲಿದೆ.

ಮಾತಾ-ಪಿತೃರ ಕೀರುತಿ ಬೆಳಗಿ
ದೂರದನಂತಕೆ ನೀ ಹೋದೆ;
ಅಕ್ಕನ ತೆರದಿಂ ನಿರ್ಮಲಳಾಗಿ
ಪುಣ್ಯದ ಸ್ವರ್ಗವ ನೀ ಪಡೆದೆ.

—ಶ್ರೀ. ಶಂಕರನಂದನ, ಗೋಕಾಕ.

# ರಂಗಭೂಮಿ

ಜಗವಿದೊಂದು ರಂಗಭೂಮಿ
ನಿತ್ಯ ನಾಟ್ಯನರ್ತನ
ಹೆಣ್ಣು-ಗಂಡು ಕೂಡಿಕೊಂಡು
ಗೈವ ಪಾತ್ರಧಾರಣ.
ಸೂತ್ರಧಾರ ಯಾರೊ ಏನೊ
ಯಾರು ಅರಿಯರಾತನ
ಅವನು ಕುಣಿಸಿದಂತೆ ಕುಣಿದು
ಮರೆವರಿವರು ವ್ಯೈಮನ
ನಾಂದಿಯಾದುದೆಂದೊ ಮುಂಚೆ
ಎಂದಿಗಿಹುದೊ ಮಂಗಲಾ
ಯುಗಗಳಾಚೆಯಿಂದ ಬಂದು
ಯುಗಗಳೆನಿತೊ ಸಂದುದಂ
ಎನಿತೊ ದೃಶ್ಯವಳಿದು ಮತ್ತೆ
ಎನಿತು ದೃಶ್ಯವೆದ್ದುದಂ
ಬರಿಯ ಊಹೆ ಕಂಡುದಾರು
ಕುಣಿತವೇ ನಿರಂತರಂ.
ಇಂತು ನಿತ್ಯ ನಿತ್ಯ ಸತ್ಯ
ಬಾಳರಂಗಭೂಮಿಯು
ಅನಿರ್ಬಂಧ ಸ್ವಚ್ಛಂದ
ನೃತ್ಯವಿದುವೆ ಸತ್ಯವು
ಬಂದುದೆಂತೊ ಅರಿತೆ ಮುಂದೆ
ಸಾಗಲೆಮ್ಮ ನರ್ತನ
ಇದುವೆ ರಂಗಭೂಮಿಯಲ್ಲಿ
ನಟಿಸುವೆಮ್ಮ ಜೀವನ.

**ಕೆ. ಮಲ್ಲಿಕಾರ್ಜುನ, ಗೋಕಾಕ.**

### ಶ್ರೀ ಕೃಷ್ಣಮೂರ್ತಿ ಪುರಾಣಿಕ ಇವರ

## ಜೀವನ ಮತ್ತು ಸಾಹಿತ್ಯ.

ಲೇಖಕರು:—**ಶ್ರೀ ಎಂ. ಭಾಲಚಂದ್ರ**, ಗೋಕಾಕ.

ಶ್ರೀ ಕೃಷ್ಣಮೂರ್ತಿ ಪುರಾಣಿಕರು ಹುಟ್ಟಿ ಬೆಳೆದು ಪ್ರಾಥಮಿಕ ಶಿಕ್ಷಣ ಪಡೆದುದು ವಿಜಾಪೂರ ಜಿಲ್ಹೆ (ಬಿಳಗಿ)ಯಲ್ಲಿ. ಉಚ್ಚ ಶಿಕ್ಷಣ ಪಡೆದು ರೂಪುಗೊಂಡುದು ಧಾರವಾಡ ಜಿಲ್ಹೆಯ (ಧಾರವಾಡದ)ಲ್ಲಿ. ಪಡೆದ ಜ್ಞಾನದಿಂದ ಸಾಂಸ್ಕೃತಿಕ ಪ್ರಸಾರಗೈಯ್ಯುತ್ತಿರುವುದು ಬೆಳಗಾವಿ ಜಿಲ್ಹೆಯ (ಗೋಕಾಕದ)ಲ್ಲಿ. ಹೀಗೆ ಸಮಸ್ತ ಉತ್ತರ ಕರ್ನಾಟಕವು ಇವರು ತುಳಿದ ನೆಲವಾಗಿದೆ. ಹೀಗೆಂದ ಮಾತ್ರಕ್ಕೆ ಉಳಿದ ಕನ್ನಡನಾಡು ಇವರಿಗಪರಿಚಿತ ವೆಂದರ್ಥವಲ್ಲ. ಹೈದ್ರಾಬಾದ ಕಾರವಾರ ನಾಡಿನಲ್ಲಿ ಇವರ ಭಾಷಣ ಕೇಳದ ಜನರು ತೀರ ಕಡಿಮೆ. ಮೈಸೂರು ನಾಡು ಇವರ ಕಾದಂಬರಿಗಳ ತವರು. ಅಲ್ಲಿಯ ಮನೆಮನೆಗಳಲ್ಲೂ ಇವರ ಪುಸ್ತಕ ಕಾಣಬಹುದೆಂದರೆ ಅತಿಶಯೋಕ್ತಿಯಾಗಲಾರದು.

ಹೀಗೆ ಇಡೀ ಕರ್ನಾಟಕಕ್ಕೆ ಸುಪರಿಚಿತ ಸಾಹಿತಿಯಾದವರ ಜೀವನ ಮತ್ತು ಸಾಹಿತ್ಯದ ಬಗ್ಗೆ ಹೆಚ್ಚಿಗೆ ತಿಳಿಯುವ ಆತುರತೆ, ಕೇಳುವ ಕುತೂಹಲ ಪ್ರತಿಯೊರ್ವ ಓದುಗರ ಕಿವಿಯಂಚಿನಲ್ಲೇ ಇದ್ದೇ ಇರುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಶ್ರೀ ಪುರಾಣಿಕರವರ ನಿಯಮಿತ ಜೀವನ, ದೃಢಮನಸ್ಸು ಆತ್ಮ ಪ್ರತಿಷ್ಠೆ, ಅನುಕರಣೀಯವಾಗಿವೆ. 'Literature is the reflection of life' ಎಂಬಂತೆ ಶ್ರೀ ಕೃಷ್ಣಮೂರ್ತಿಯವರ ಪ್ರತಿ ಪುಸ್ತಕದಲ್ಲಿಯೂ ಅವರ ಜೀವನದ ಪ್ರತಿಬಿಂಬವನ್ನು ನಾವು ಕಾಣಬಹುದು. ಇವರ ಪ್ರತಿಯೊಂದು ಪುಸ್ತಕವೂ ಅವರ ಜೀವನ ಶಿಖರದ ಒಂದೊಂದು ಮೆಟ್ಟಲು ಇದ್ದ ಹಾಗೆ. 'ಮುಗಿಲಮಲ್ಲಿಗೆ', 'ಮಂಜುಳಾ', 'ಹೊಸಬಾಳು', 'ತೆರೆದ ಕಣ್ಣು', ಇವು ಇದಕ್ಕೆ ನಿದರ್ಶನವಾಗಿವೆ.

ಇಂದಿನ ಅಡ್ಡದಾರಿ ಹಿಡಿದಿರುವ ಸಮಾಜವನ್ನು ತಿದ್ದುವದರಲ್ಲಿ ಶ್ರೀ ಕೃಷ್ಣಮೂರ್ತಿಯವರ ಲೇಖಣಿ ತಕ್ಕಮಟ್ಟಿಗೆ ಯಶಸ್ಸನ್ನು ಪಡೆದಿದೆ.

ಇಂದಿನವರೆಗೆ ಬಡರೈತರ ದುಡಿತದಮೇಲೆ ಜೀವಿಸಿದ ಒಡೆಯರೂ ಕೂಡ ಇನ್ನು ದುಡಿಯಬೇಕು. ಮತ್ತು ದುಡಿಯಬಲ್ಲರೆಂಬುದನ್ನು 'ಬೆವರಿನಬೆಲೆ' 'ಮಣ್ಣಿನ ಮಗಳು', 'ಹಬ್ಬಿದಬಳ್ಳಿ', ಮುಂತಾದ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಬಡತನ ಒಡೆತನ ಇವೇ ಇಂದಿನ ಸಮಾಜದ ಅಧೋಗತಿಗೆ ಕಾರಣಗಳು. ಇವೆರಡನ್ನೂ ಒಂದೇ ಕಾಲಕ್ಕೆ ಹೋಗಲಾಡಿಸುವದೊಂದು ಗಹನ ಸಮಸ್ಯೆ. ಇಂತಹ ಅದೆಷ್ಟೋ ಸಮಸ್ಯೆಗಳನ್ನು ಸಲಿಲವಾಗಿ ಬಿಡಿಸಿದುದನ್ನು ಇವರ ಕಾದಂಬರಿಗಳಲ್ಲಿ ಕಾಣಬಹುದು.

ಇಂದಿನ ಸಮಾಜದ ಇನ್ನೊಂದು ಕರಾಳ ಪ್ರಶ್ನೆಯೆಂದರೆ ವರದಕ್ಷಿಣೆಯದು. ಇದೊಂದು ವ್ಯಾಪಾರವೇ ಆಗಿರುವ ಇಂದಿನ ಕಾಲದಲ್ಲಿ ಇದರಿಂದ ಅದೆಂತಹ ಅನಾಹುತಗಳೂ, ಬಿಕ್ಕಟ್ಟಿನ ಪರಿಸ್ಥಿತಿಗಳೂ, ಜೀವನದಲ್ಲಿ ನೀರಸತೆಯೂ ಉಂಟಾಗುತ್ತದೆಂಬುದನ್ನೂ, ನಿಜವಾದ ಪ್ರೀತಿಯಿದ್ದಲ್ಲಿ ಬಾಹ್ಯಸಂಪತ್ತು ಯಾವುದಕ್ಕೂ ಅಡ್ಡಿಮಾಡಲಾರದೆಂಬುದನ್ನು ಇವರ ಇತ್ತೀಚಿನ ಕಾದಂಬರಿಗಳಾದ, 'ಭಾಗೀರಥಿ', 'ಮನೆತುಂಬಿದ ಹೆಣ್ಣು' 'ಮುತ್ತೈದೆ', 'ಮನಸೋತ ಮನದನ್ನೆ', 'ಕುಲವಧು' ಮತ್ತು 'ವೇಷಧಾರಿ'ಗಳಲ್ಲಿ ಕಾಣಬಹುದು. (ಇವುಗಳಲ್ಲಿ ವಿಧವಾ ವಿವಾಹದ ಪ್ರಶ್ನೆಗಳೂ ಬರುತ್ತವೆ)

ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗಳು ಇತ್ತೀಚೆಗೆ ಬತ್ತದ ಬೆಳೆಯಂತೆ ಬೆಳೆದವು. ಆದರೆ ಅವುಗಳಲ್ಲಿ ಸತ್ವಪೂರಿತವಾದವುವೆಂದರೆ ತೀರಕಡಿಮೆ. ಸಂಪಾದಕ ಸಂಪಾದಕರಲ್ಲಿಯ ಹೊಟ್ಟೆಯುರಿಯನ್ನೂ, ಲೇಖಕ-ಲೇಖಕರಲ್ಲಿಯ ವೈಮನಸ್ಸನ್ನೂ ಕೆಲವು ಲೇಖಕರು ಹಲವಾರು ಕಾದಂಬರಿಗಳಲ್ಲಿ ಚಿತ್ರಿಸಿದರು. ಈ ಕಾದಂಬರಿಗಳು ಕೆಲವೊಂದು ಜನಕ್ಕೆ ಸೀಮಿತವಾದವು. ಅದಷ್ಟೇ ಜನ ಮಾತ್ರ ಇಂಥ ಪುಸ್ತಕಗಳಿಂದ ಸಂತೋಷಗೊಂಡು ಮತ್ತೆ ಅಂಥವನ್ನೇ ಅಪೇಕ್ಷಿಸಿತು. ಪತ್ರಿಕಾ ವ್ಯವಸಾಯದ ಒಳತಿರುಳು, ಲೇಖಕ-ಲೇಖಕರಲ್ಲಿಯ ಮನೆಯ ಮತ್ತು ಮನಸ್ಥಿತಿ ಅರಿಯದವರಿಗೆ ಇವು ನೀರಸವಾದವು.

ನಮ್ಮ ಸಮಾಜದಲ್ಲಿ ವೇಶ್ಯಾಸಮಸ್ಯೆಯೊಂದು ಮಹತ್ವದ್ದಾಗಿ ವಿಚಾರಿಸುವಂಥದು. ಈ ಸಮಸ್ಯೆಯನ್ನೆತ್ತಿ ಅನೇಕರು ಅನೇಕ ಪುಸ್ತಕಗಳನ್ನು ಬರೆದರು. ಆದರೆ ಈ ಪುಸ್ತಕಗಳು ಮಾತ್ರ ವೇಶ್ಯೆಯರಿಗಾಗಿಯೇ ಆದವು. ಆ

ಪುಸ್ತಕಗಳನ್ನೋದಿ ಅವರು ಮನದಣಿದು ತಮಗೆ ತಮ್ಮ ಜೀವನವೇ ಲೇಸೆಂದುಕೊಂಡರು. ಅಂಥ ಅಶ್ಲೀಲ ಭಾಷೆಯನ್ನು ಅನ್ಯರು ಓದುವದೆಂದರೆ ಕಿವಿ ಕಣ್ಣು ಮುಚ್ಚಿ ಓದಿಕೇಳಿದಂತೆ. ಇನ್ನು ಅಸ್ಪೃಶ್ಯತೆ ನಿವಾರಣೆಗಾಗಿ ಕೆಲ ಪುಸ್ತಕಗಳು ಬಂದವು. ಇವುಗಳಲ್ಲಿ ವೇಶ್ಯಾ'ಸಮಸ್ಯೆಯೂ ಕೂಡಿಕೊಂಡಿತ್ತು. ಇವುಗಳಿಂದಾದರೂ ಅಸ್ಪೃಶ್ಯರು ತಾವು ಸಾಗಿಸಿರುವ ಜೀವನವೇ ಒಳಿತೆಂದುಕೊಂಡರು. ಇದಕ್ಕೊಂದು ಕಾರಣ; ಲೇಖಕರು ಸಮಸ್ಯೆಯನ್ನು ಇದ್ದಕ್ಕಿದ್ದಂತೆಯೋ-ಸ್ವಲ್ಪ ಬಣ್ಣ ಹಚ್ಚಿಯೋ ಬರೆಯುವದೇನೋ ನಿಜ; ಆದರೆ ಅದರಿಂದಾಗುವ ದುಷ್ಪರಿಣಾಮಗಳನ್ನು ಸ್ಪಷ್ಟವಾಗಿ ಚಿತ್ರಿಸಿ ಅವುಗಳ ಸುಧಾರಣೆಯ-ನಿವಾರಣೆಯ ಮಾರ್ಗದರ್ಶನವನ್ನು ಮಾಡುವದು ಮಾತ್ರ ಕಡಿಮೆ. ಇಂಥ ಪುಸ್ತಕಗಳು ಕನ್ನಡದಲ್ಲಿ ತೀರಕಡಿಮೆ.

ಪ್ರವಾಸದ ಬೇಸರವನ್ನೋ-ದಿನದ ದುಡಿತದ ಬೇಸರವನ್ನೋ ಕಳೆಯಲು ನಮ್ಮಲ್ಲಿ ಪತ್ತೇದಾರಿ ಕಾದಂಬರಿಗಳು ಹುಟ್ಟಿಕೊಂಡವು ಅವುಗಳಿಂದ ಜನರ ಮನಸ್ಸಿನ ಮೇಲೆ ಯಾವ ಒಳ್ಳೆಯ ಪರಿಣಾಮವಾಗುವದಂತಿರಲಿ, ಬದಲಾಗಿ ಮನಸ್ಸನ್ನು ದೂಷಿತಗೊಳಿಸುವದೇ ಇವುಗಳ ಕಾರ್ಯವಾಯಿತು.

ಹೀಗಾಗಿ ನಮ್ಮಲ್ಲಿಯ ಪುಸ್ತಕಗಳು ಕೇವಲ ಪುರುಷರಿಗಾಗಿ ಮಾತ್ರವಾದವು. ಪತ್ರಿಕಾ ವ್ಯವಸಾಯದ ಒಳತಿರುಳು-ಲೇಖಕ-ಲೇಖಕರಲ್ಲಿಯ ಹೊಟ್ಟೇಕಿಚ್ಚನ್ನು ತಿಳಿದ ಮಹಿಳೆಯರು ನಮ್ಮಲ್ಲೆಷ್ಟು ಜನ? ವೇಶ್ಯಾ ಸಮಸ್ಯೆಗಳಂಥ ಸಮಸ್ಯೆಗಳನ್ನು ನಿವಾರಿಸಿದ ಪುಸ್ತಕಗಳನ್ನು ನಮ್ಮ ಮಹಿಳೆಯರು ಕಣ್ಣಿನಿಂದ ನೋಡುವದೂ ಇಲ್ಲ ಇನ್ನು ಪತ್ತೇದಾರಿ ಕಾದಂಬರಿಗಳನ್ನು ಓದುವುದು ಪುರುಷರಿಗೂ ಕೂಡ ಅಸಹ್ಯವಿರುವಾಗ ಸ್ತ್ರೀಯರಂತೂ ಅವನ್ನು ಮುಟ್ಟುವದು ಮಹಾಪಾಪವಾಯಿತು. ಹೀಗಾಗಿ ಸ್ತ್ರೀಯರು ಕಾದಂಬರಿಗಳನ್ನೋದುವದು ಅಪರಾಧವೇ ಆಯಿತು. ಆದರೆ ಇತ್ತಿತ್ತಲಾಗಿ ಸ್ತ್ರೀಯರಲ್ಲಿ ಕಲಿತವರ ಸಂಖ್ಯೆಯು ಹೆಚ್ಚಾಗುತ್ತಿರುವದರಿಂದ ಅವರಲ್ಲಿಯೂ ಓದುಗರು ಹೆಚ್ಚಾಗತೊಡಗಿದರು. ಆದರೆ ಅವರಿಗೆ ಮನ ಹಿಡಿಯುವ ಪುಸ್ತಕಗಳು ಮಾತ್ರ ಕನ್ನಡದಲ್ಲಿ ತೀರ ಕಡಿಮೆಯಾದುದರಿಂದ ಅವರು ಮತ್ತೆ ಐತಿಹಾಸಿಕ ಪೌರಾಣಿಕಗಳನ್ನೇ ಓದಬೇಕಾಗುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಶ್ರೀ ಕೃಷ್ಣಮೂರ್ತಿ ಪುರಾಣಿಕರ ಪ್ರತಿಯೊಂದು ಕಾದಂಬರಿಯೂ ಪ್ರತಿಯೊಬ್ಬ ಕನ್ನಡತಿಯು ಮೆಚ್ಚುವಂತಾದವು.

# ವ್ಯರ್ಥ ಆಸೆ

ಶ್ರೀ. ಬಿ. ಎ. ಸನದಿ, ಶಮನೇವಾಡಿ,
ಬಿ. ಎ.

ನಮ್ಮ ತುತ್ತನು ಕಸಿದುಕೊಂಬ ಹುಂಬರಿಗೇನು
ಸೊಗ ದೊರೆವುದಿದೆ ಕಾಣೆ ! ಅವರ ಸನ್ಮತಿಗೂಣೆ !

ನಮ್ಮ ಭಾಗ್ಯವ ಕಂಡು ಇವರಿಗೇತಕೆ ಬೇನೆ ?
ಈ ಹುಚ್ಚು ಈ ಕಿಚ್ಚು ಕೊನೆಗು ಉಳಿಯುವವೇನು ?

ಸತ್ಯದವಗುಂಠನದಿ ಅವಿತುಕೊಂಡಿರೆ ಸಟೆಯು
ಏಸುದಿನ ಉಳಿದೀತು ಬೆಳೆದೀತು ಈ ಗುಟ್ಟು ?

ಕೆಟ್ಟಬಾಳಿಗೆ ನಾಳೆ ದೊರೆತೆ ದೊರೆವುದು ಪೆಟ್ಟು !
ಅಂತಿರಲು ಈ ವ್ಯರ್ಥ ಆಸೆಯಳಿವುದೆ ಸುಖವು !

ಕ್ಷೀರಸಾಗರದಲ್ಲಿ ಹಂಸವಿರುವುದೆ ಚಂದ !
ಬೇಕೆಂದೆ ಮೊಸಳೆಬಾಳ್ ನಾಗಿಸುವುದೇಂ ಸೊಗಸು ?

ಅನ್ಯರನ್ನವ ಕಸಿದು ತಿನ್ನುವನ್ಯಾಯದೊಳು
ಸೊಗಯಿಸುವ ಜನರಿರುವು ಕಾಣದೆಂದಾನಂದ !

ಯಾಕೆ ನೆರೆಯವರೆಮ್ಮ ಕಾಡುವರೊ ಮದದುಂಬಿ ?
ಗಟ್ಟಿಯಿರದಿರೆ ಕೂಡ ತಮ್ಮ ಡೇರೆಯ ಕಂಬಿ !

# ರೈತನ ಬೆನ್ನೆಲಬು-ಬಸವ.

**ಲೇಖಕರು:—ಶ್ರೀ. ಮುರಗೇಶ ಅಂಟಿನ, ಬೆಳಗಾವಿ.**

ಭಾರತ ಕೃಷಿಪ್ರಧಾನವಾದ ದೇಶ—ಒಕ್ಕಲು ಮಕ್ಕಳ ದೇಶ. ಅವರೇ ನಾಡಿನ ಬೆನ್ನೆಲಬು. ಅವರ ಕೃಷಿಕರ್ಮಕ್ಕೆ ಬೇಕಾದ ಮೂಲ ವಸ್ತು—ಬಸವ. ಆದಿಲ್ಲದೆ ಅವರ ಆಟ ಸಾಗುವಂತಿಲ್ಲ. ಎತ್ತುಗಳೇ ಅವರ ಸರ್ವಸ್ವ ಅವುಗಳ ಬಗೆಗೆ ಅವರಿಗೆ ಎಷ್ಟು ಹಾಡಿದರೂ ಸಮಾಧಾನವಿಲ್ಲ. ಒಂದೊಂದು ಊರಲ್ಲಿ ಒಂದೊಂದು ತೆರನಾಗಿ ಹಾಡುತ್ತಾರೆ. 'ಹಂತಿಯ ಪದಗಳು, ಭಲಾರಿ, ಯಾತದ ಪದಗಳು' ಎಂದು ನಾನಾಪರಿಯಾಗಿ ಅವುಗಳು ಪ್ರಸಿದ್ಧಿ ಪಡೆದಿವೆ.

ಪ್ರತಿಯೊಬ್ಬ ಒಕ್ಕಲಿಗನೂ ಬಲವಾಗಿ ಬಯಿಸುವ ಬಯಕೆ,—
"ಬಸವಣ್ಣ ಹುಟ್ಟಲಿ ಹೊಸಪ್ಯಾಟಿ ಕಟ್ಟಲಿ
ರಸರಾಯನಾ ಕಬ್ಬು ಬೆಳೆಯಲಿ—ಕಡಪಟ್ಟಿ
ಬಸವಣ್ಣನಾ ತೇರು ಎಳೆಯಲಿ."

—ಎಂದು. ಬಸವಣ್ಣ ಹುಟ್ಟದರೆ ಬೆಳೆಚನ್ನಾಗಿ ಬೆಳೆಯುತ್ತದೆ. ರಸವತ್ತಾಗಿ ಬೆಳೆಯುತ್ತದೆ. ತಾವು ಸುಖವಾಗಿರಬಹುದು. ಎಂದಿಷ್ಟೇ ಸ್ವಾರ್ಥಪರವಾದ ಮಾತನ್ನಾಡದೇ ಸನಾತನಿಗಳಾದ ರೈತರು ಉದಾತ್ತ ಧಾರ್ಮಿಕ ಭಾವನೆಯಿಂದ ಕಡಪಟ್ಟೆ ಬಸವಣ್ಣನ ತೇರು ಎಳೆಯಲಿ, ಎಂದು ಹಾಡುತ್ತಾರೆ.

ಹೋರಿ ಇನ್ನೂ ಹುಟ್ಟುವ ಮೊದಲು—
"ಬಾಗಲಕ್ವಾಟ್ಯಾಗ ಹುಬ್ಬಳ್ಯಾರಂಗಡ್ಯಾಗ
ಹಸರ ಗಲ್ಲೀಪ ತಗಿಸೇನ—ವರಸಕೊಮ್ಮೆ
ನನ್ನೆತ್ತ ಮೆರಿಸೇನ!"

—ಎಂದು ರೈತ ತನ್ನ ಹಸು ಹೋರಿಯನ್ನೇ ಈಯಲಿ ಎಂದು ದೇವರಲ್ಲಿ ಬೇಡಿಕೊಳ್ಳುತ್ತಾನೆ.

ತನ್ನದನಗಳು ನದಿಯಲ್ಲಿ ಈಜುತ್ತಿರುವಾಗಲೂ ರೈತನಿಗೆ ಅವುಗಳ ಸೌಂದರ್ಯ ಕಾಣಿಸುತ್ತದೆ! ಅವರ ಕಣ್ಣುಗಳಲ್ಲಿ ಯಾವಾಗಲೂ

ಸೌಂದರ್ಯವೊ ಏನೋ! ಈಜುತ್ತಿರುವ ಎತ್ತಿನ ಕೊಂಬು, ಇಣಿಗಳನ್ನು ನೋಡಿ ಸೌಂದರ್ಯಶೋಧಕ ರೈತ ಅವುಗಳಿಗೇ ಬಣ್ಣ ಕೊಟ್ಟು,

"ತುಂಬಿದ ಹೊಳಿಯಾಗ ಕೊಂಬ ಕಾಣಿಸತಾವ
ಬಂಗಾರದಿಣಿಯ ಬಸವಣ್ಣ
ಇಂಬು ಹೊಳೆಯಾಗ ನೆಲಿಶಾನ!"

—ಎಂದು ಅಂದ.

ತನ್ನ ದನಗಳು ಕಾದಿದರೂ ಆತನಿಗೆ ಸಂತೋಷ!
"ಕಡಪಟ್ಟಿ ಬಸವಣ್ಣ, ಬಾಗೋಡಿ ಬಸವಣ್ಣ
ಕಾದ ಬಿದ್ದಾರ ಎರಿಯಾಗ–ಗೋಪಾಲಿ
ತುಂಬಿದಾರುತಿ ಬೆಳಗ್ಯಾಳ!"

ಅವುಗಳ ಸುಂದರವಾದ ಕಾದಾಟವನ್ನು ಕಂಡು ಭೂದೇವಿ (ಗೋಪಾಲಿ) 'ತುಂಬಿದಾರುತಿ' ಬೆಳಗುತ್ತಾಳಂತೆ! ಬಹುತರವಾಗಿ ಆ ಎತ್ತು ಪೌರ್ಣಿಮೆಯ ಸಾಯಂಕಾಲದಲ್ಲಿ ಕಾದು ಹಿಡಿದಿರಬಹುದು. ಕವಿಗೆ, ಮುಳುಗುತ್ತಿರುವ ಬಂಗಾರ ಬಣ್ಣದ ಸೂರ್ಯ, ಮೂಡುತ್ತಿರುವ ಚಂದ್ರನನ್ನು ನೋಡಿ ಜೋಡು ಆರುತಿಯಂತೆ ಕಲ್ಪನೆ ಬಂದಿರಬಹುದು. ಅದನ್ನೇ ಸೃಷ್ಟಿಮಾತೆ ತನ್ನ ಎತ್ತುಗಳಿಗೆ ಬೆಳಗುತ್ತಿರುವಂತೆ ರೈತನಿಗೆ ಭಾಸವಾಗಿರಬೇಕು.

ಯೌವನ ಭರದಲ್ಲಿ ಹೋರಿ ಎಲ್ಲಿಗೋ ಓಡಿ ಹೋಗಿದೆ. ವ್ಯಾಕುಲ ಚಿತ್ತನಾದ ರೈತ, ಮಲ್ಲಿಕಾರ್ಜುನನನ್ನು ಹುಡುಕುವ ಅಕ್ಕನಂತೆ ಕಂಡವರಿಗೆಲ್ಲ ಅದರ ಗುರುತು, ಪರಿಚಯ, ಸ್ವಭಾವಾದಿಗಳನ್ನೆಲ್ಲ ಹೇಳಿ ತಿಳಿಯಲೆತ್ನಿಸುತ್ತಾನೆ.

"ಎತ್ತ 'ರಾಮಣ್ಣ'–ನಮ್ಮೆತ್ತ–ಕಂಡೇನೊ ?.
ಮುತ್ತಿನ ಹಗ್ಗ ಮುಗದಾಣ–ಹಾಕೊಂಡ
ಹುತ್ತಿನ ಕೆಳಗ ಹಾಯುವನ!"

ತನ್ನ ಎತ್ತು 'ರಾಮಣ್ಣ' ಬಲು ಶೂರ, ಧೈರ್ಯಶಾಲಿ ಎಂಬುದನ್ನು ಹೇಳುವಾಗ ಹುತ್ತಿನ ಕೆಳಗ ಹಾಯುವನ! ಎಂದು ಹೇಳಿ ಅದರ ಧೈರ್ಯದ ಪೂರ್ಣ ಕಲ್ಪನೆಯನ್ನು ತಂದು ಕೊಡುತ್ತಾನೆ.

## ಬೆಳದಿಂಗಳು

ಅನುಸರಿಸೆ ಸತಿಸಂಧ್ಯೆ ಪತಿಪ್ರಭಾಕರನಂ,
ಉಲಿಯುತಿರೆ ಪಕ್ಕಿಗಳು ಸಹಿಸದೆಯೆ ವಿರಹಂ,
ತಿರೆ ಬೆಚ್ಚಿ-ದಿಕ್ಕೆಟ್ಟು ಪಡುವನದ ದಿಕ್ತಟಂ
ಕೌತುಕದಿ ನೋಡುತಿರೆ, ಎಲ್ಲಿ ಆ ಸೂರ್ಯಂ ?
ಸುಳಿಗಾಳಿ ಸುಳಿ-ಸುಳಿದು-ಬೀಸುತಿರೆ ಕದ್ದು
ಹೂವ-ಹೂಗಳ ಮಧು-ಸುಗಂಧವನು ಹೊದ್ದು
ಕುಂಜಿದರಳೆಯು ಮುಗಿಲ ತುಂಡುಗಳನೋಸರಿಸಿ
ಆಹ ! ಇಂದು ಹೊಳೆವನಿದೊ ಮೂಡನದ ದಿಕ್ತಟದಿ!
ಲಯುಮಾದ ಲಾವಣ್ಯ-ವಿಭ್ರಮ-ವಿಳಾಸಗಳು
ತಲೆದೋರೆ ತಿರುತಿರುಗಿ ಬೆಳ್ಳಿ ಒಸನವ ಹೊದ್ದು
ಶೋಭಿಪಳು! ಹಾಲ ಹೊಳೆ ಹರಿಯುತೊಡಗಿದುದತ್ತ !
ಸೂ-ಶುಭ್ರ ಗಿಡಗಳೊಳು ಬೆಳ್ಳಿ ಫಲಗಳು ಹೊಳೆಯೆ
ಕಲ್ಬಂಡೆ ಬೆಳ್ಳಿ ತುಣುಕಿನೊಲು ನೆರೆಶೋಭಿಸಲು
ಬೆಳದಿಂಗಳೆಸೆಯಿತಹ ! ! ಮಲ್ಲಿಗೆಗಳಿಗು ಸೋಲು !!!

**—ಚಂದ್ರಶೇಖರ ಕಂಬಾರ, ಘೋಡಗೇರಿ.**

## ಬೆಳಕು !

ಮೂರು ದಿನದ ಬಾಳಿನಲ್ಲಿ
ತುಂಬಿರುವುದು ಗೋಳು ;
ಅಳಿಸಿ ಹಾಕದಿದ್ದರದನು
ನಮ್ಮ ಬದುಕೆ ಹಾಳು !
ಮೂರು ದಿನದ ಬಾಳಿನಲ್ಲಿ
ಕಾಣಬೇಕು ಬೆಳಕು;
ಕಷ್ಟ-ನಷ್ಟವೆನಿತೊ ಬರಲಿ
ನಗುತಬಾಳಬೇಕು !

**—ಶಂಕರ ಧರಣಿ.**

# 'ಉದಯ'ವನ್ನು ಕುರಿತು....

* " ಜನತೆಯಲ್ಲಿ, ಅದರಲ್ಲಿಯೂ ಬಾಲಕರಲ್ಲಿ ರಾಷ್ಟ್ರೀಯ ಜೀವನದ ಪ್ರೇರಣೆಯನ್ನು ಕೊಡತಕ್ಕ ಸಾಹಿತ್ಯದ ಅವಶ್ಯಕತೆಯು, ಸ್ವತಂತ್ರ ಭಾರತದಲ್ಲಿ ಎಂದಿಗಿಂತಲೂ ಇಂದು ಹೆಚ್ಚಿದೆ 'ಉದಯ'ವು ಆ ಕಡೆಗೆ ತನ್ನ ಹೆಜ್ಜೆಯನ್ನು ಮುಂದಿಟ್ಟು ಮುನ್ನಡೆಯಲು ಉದಯಿಸಿರುವದು ಆನಂದದ ಹಾಗೂ ಪ್ರಶಂಸನೀಯ ವಿಚಾರವಾಗಿದೆ. ......"

—**ಶ್ರೀ. ಬಿ ಎಸ್. ಎನ್. ಮಲ್ಯ,**
'ವಿಕ್ರಮ' ಸಂಪಾದಕರು, ಬೆಂಗಳೂರ.

'ಉದಯ'....

ಹೆಸರೇ ಸೂಚಿಸುವಂತೆ ಉದಯೋನ್ಮುಖ ಲೇಖಕರ ಬೆಳಗಿನ ಬರಹಗಳ ಸಂಕಲನವಾದ ಈ ಪತ್ರಿಕೆಯ ಸಂಪಾದಕರ ಪ್ರಯತ್ನ ಪ್ರೋತ್ಸಾಹನಾರ್ಹವಾಗಿದೆ. ಹಸ್ತಪತ್ರಿಕೆ ಹೊರಡಿಸುವದು ಸುಲಭ ಕೆಲಸವೇನೂ ಅಲ್ಲ. ಲೇಖನ-ಹಸ್ತಾಕ್ಷರ–ಚಿತ್ರಲೇಖನಗಳ ತ್ರಿವೇಣಿಸಂಗಮವೆನಿಸುವ ಇಂಥ ಪತ್ರಿಕೆಗಳ ಯಶಸ್ಸಿಗೆ ಬಹುಜನರ ಶ್ರಮ ಬಹುಪರಿಯಾಗಿ ಸಲ್ಲಬೇಕಾಗುತ್ತದೆ........."

—**ಬಿ. ಎ. ಸನದಿ,** ಶಮನೇವಾಡಿ.

"........ 'ಉದಯ'ದ ದೀಪಾವಳಿ ಸಂಚಿಕೆಯಲ್ಲಿ ವ್ಯಕ್ತವಾದ ಉದಾತ್ತ ಆದರ್ಶವಾದವೂ, ಕಲಾಪ್ರೇಮವೂ, ದೀರ್ಘಶ್ರಮವೂ ಅಭಿನಂದನೀಯವಾಗಿದೆ."

—**ಪ್ರೊ. ಶಂ. ರಾ. ಮೊಕಾಶಿ,** ಮುಂಬಯಿ.

" ಇಂದು ಈ ಪತ್ರಿಕೆಯು ತನ್ನದೇ ಆದ ಹೊಸಮಾರ್ಗವೊಂದನ್ನು ಕಲ್ಪಿಸಿ ಮುನ್ನಡೆದಿರುವದು ಅಭಿನಂದನಾರ್ಹವಾಗಿದೆ...."

—" **ನಂದಕಿಶೋರ** " ಗೋಕಾವಿ.

"....'ಉದಯ'ವು ನಾಡಿನ ಜೀವನವನ್ನು ಸುವರ್ಣಮಯ ವಾಗಿ ಮಾಡಿ ಬೆಳಗಲೆಂದು ನನ್ನ ಪ್ರಾರ್ಥನೆ."

—ಶ್ರೀ. ಎಸ್. ವ್ಹಿ. ನೂಲಿ, ಗೋಕಾವಿ.

"....ಸಾಹಿತ್ಯದ ಪ್ರಗತಿಶೀಲ ಮಾರ್ಗದಲ್ಲಿ ಇಂದು ನಮ್ಮ ತರುಣರು ಸಾಹಸದಿಂದ ಮುನ್ನುಗ್ಗುತ್ತಿದ್ದಾರೆ. ಸಾಹಿತ್ಯದಲ್ಲಿ ರುಚಿಯನ್ನು ಕಂಡ ನನ್ನ ಸಹೋದರರಂತಿರುವ ಕು. ಬಾಳೇಶ ಅವಳು ಈ ತರುಣರಲ್ಲಿ ಒಬ್ಬರೆಂದು ಹೇಳಬೇಕು.......ಉದಯದ ದೀಪಾವಳಿ ಸಂಚಿಕೆಯು ಪ್ರಗತಿಪರ ಸಂಚಿಕೆಯು."

—ಕು. ಮಾಲತಿ ತೆರಗುಂಡಿ, ಬೆಳಗಾವಿ.

"...ಸಂಪಾದಕರು ಪರಿಶ್ರಮವಹಿಸಿ ಬೇರೆ ಬೇರೆ ವಿಷಯಗಳನ್ನು ಕುರಿತು ಲೇಖನಗಳನ್ನು ಸಂಗ್ರಹಿಸಿದ್ದಾರೆ. ಇದರಿಂದ ಸಂಪಾದಕರ ಉತ್ಸಾಹ, ವಾಚನಾಭಿರುಚಿ, ವಿಷಯಗಳ ಆಯ್ಕೆ ಇವುಗಳ ಸ್ಪಷ್ಟವಾದ ಭಾವನೆಯು ಹುಟ್ಟದಿರಲಾರದು......."

—ಪ್ರಿ. ಬ. ಗಂ. ತುರಮರಿ, ಬೆಳಗಾವಿ.

"......ಉದಯ ದೀಪಾವಳಿ ಸಂಚಿಕೆಯು ಜ್ಞಾನಜ್ಯೋತಿ ನಮ್ಮ ನಾಡಿನಲ್ಲೆಲ್ಲ ತೂಳಗಿ ಬೆಳಗಲಿ. ಹಿರಿಯ ಸಂದೇಶವನ್ನು ಬೀರಲಿ. ತರುಣ ಪ್ರಪಂಚದ ಈ ಕೈಬರಹದ ಪತ್ರಿಕೆಯು ಬೇಗನೆ ಮುದ್ರಿತ ಪತ್ರಿಕೆಯಾಗಲೆಂಬುದೇ ನನ್ನ ಹೆಬ್ಬಯಕೆಯಾಗಿದೆ. ಈ ಕಾರ್ಯಕ್ಕೆ ಹಿರಿಯರಿಂದ ಪ್ರೋತ್ಸಾಹ ದೊರೆಯಲೆಂದು ಹಾರೈಸುತ್ತೇನೆ."

—ಪ್ರೊ. ಡಿ. ಆರ್. ಬಾಗಲಕೋಟಿ, ಧಾರವಾಡ.

"......ಸರ್ವ ವಿಷಯವನ್ನೊಳಗೊಂಡ ಈ 'ಉದಯ'ವು ಸರ್ವಾಂಗ ಸುಂದರವಾಗಿದೆ. ವಿದ್ಯಾರ್ಥಿದೆಶೆಯಲ್ಲಿಯೇ ಸಾಧಿಸಿದ ಸಂಪಾದಕರ ಈ ಸಾಹಸವು ಹೀಗೆಯೇ ಹೆಚ್ಚುತ್ತ ಚಿರಕಾಲ ಬಾಳಿ ಬೆಳಗಲೆಂದೂ, ಮುದ್ರಿತ ಪತ್ರಿಕೆಯಾಗಲೆಂದೂ ಪರಮಾತ್ಮನಲ್ಲಿ ನನ್ನ ಪ್ರಾರ್ಥನೆ."

—ಶ್ರೀಮತಿ ಶಿವಗಂಗವ್ವ ಪಟ್ಟಣಶೆಟ್ಟಿ, ಗೋಕಾವಿ.